

NOV 92

# ಮಾನವಿ

ತಿಂಗಳ ಪತ್ರಿಕೆ ನವೆಂಬರ್ 1992

ಮಾನಸ

ಸಂಪುಟ : ೬ ಸಂಚಿಕೆ : ೧೧

ನವೆಂಬರ್ - ೧೯೯೨

**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

ಬಿಡಿ ಪ್ರತಿ : **2 ರೂ.**

ಸೂಚನೆ : ವಾರ್ಷಿಕ ಚಂದಾ : **20 ರೂ.**

ಆಜೀವ ಚಂದಾ : **250 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ.ಓ.
ಮೂಲಕ ಸ್ವೀಕರಿಸಲಾಗುವುದು.

ಈ ಸಂಚಿಕೆಯಲ್ಲಿ...



ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭



## ಸಂಪಾದಕೀಯ

ಕಲಾ ಕೃತಿಯಲ್ಲಿ ಪರಿಪೂರ್ಣತೆ ಸಾಧಿಸಿದ/ ಸಾಧಿಸಬಯಸುವ ಲೇಖಕಿಯ ಬದುಕು ವಾಸ್ತವದಲ್ಲಿ ಛಿದ್ರ ಛಿದ್ರವಾಗಿರಬಹುದಾದಂತಹ ಸಾಧ್ಯತೆಗಳು ಹಲವು. ಹನ್ನೆರಡನೆಯ ಶತಮಾನದ ಅಕ್ಕಮಹಾದೇವಿಯಂತಹ ಶರಣೆಯಿಂದ ಹಿಡಿದು ಅಮೃತ ಪ್ರೀತಮ್‌ಳಂತಹ ಬರಹಗಾರ್ತಿಯರ ಜೀವನದತ್ತ ದೃಷ್ಟಿ ಹಾಯಿಸಿದಾಗ ಈ ಮಾತು ಸತ್ಯ ಇರಬಹುದು ಎನಿಸುತ್ತದೆ. ಕಮಲಾದಾಸ್ ರವರ ಆತ್ಮ ಚರಿತ್ರೆ ಕೂಡಾ ಇಂತಹ ವಾಗ್ವಾದದಲ್ಲಿ ಸಿಕ್ಕು ವಿವಾದಾತ್ಮಕ ಸುಳಿಯಲ್ಲಿಸಿಕ್ಕಿ ಹಾಕಿ ಕೊಂಡುದನ್ನು ನಾವು ಇಲ್ಲಿ ನೆನೆಯಬಹುದಾಗಿದೆ. ಸೃಜನಾತ್ಮಕ ಮನಸ್ಸಿನ ಮಿಡಿತ/ತುಡಿತಗಳಿಗೆ ಆಣೆ ಕಟ್ಟು ಎಂಬುದಿರುವುದಿಲ್ಲ. ಇಂತಹ ತುಡಿತಗಳಿಗೆ ಪಕ್ವವಾದ ಮನಸ್ಸಿನ ನೆಲೆ–ಕಲೆಯ ಪೂರ್ಣತೆಯ ಶೋಧನೆಯತ್ತ ಮುಖ ಮಾಡಿದಾಗ, ಅಥವಾ ಸೃಜನಾತ್ಮಕ ಮನಸ್ಸು ಕೃತಿಯ ಕಲೆಯ ಹಂದರಕ್ಕೆ ತುಡಿಯ ತೊಡಗಿದಾಗ ಬದುಕಿನ ಪರಿಪೂರ್ಣತೆಯ ಎಳೆ ತಪ್ಪಿ ಹೋಗುತ್ತಿದೆಯೋ ಏನೋ ?

ಲೇಖಕಿಯರ ಮುಂದಿರುವ ಸವಾಲುಗಳು ಹೇಗಿರುತ್ತವೆ ಎಂಬುದಕ್ಕೆ ಮೇಲಿನ ಮಾತು ಬರೆಯುತ್ತಿದ್ದೇನೆ. ಶಶಿ ದೇಶಪಾಂಡೆಯವರು ಕಾದಂಬರಿಗಳಲ್ಲಿ ಗಂಡು–ಹೆಣ್ಣಿನ ಸಂಬಂಧದ ಬಗ್ಗೆ ಹಿಡಿದ ವಿವರಗಳ ಕುಸುರಿ ಕೆಲಸವನ್ನು ಕನ್ನಡದಲ್ಲಿ ಯಾವ ಲೇಖಕಿಯರು ಮಾಡಿಲ್ಲ. ನಮ್ಮೊಳಗೆ ಇರುವಂತಹ ಅನುಭವ/ಅನಿಸಿಕೆಗಳನ್ನು ಬಿಚ್ಚಿಡಲು ನಮ್ಮನ್ನು ಶೋಧಿಸಿಕೊಳ್ಳುವಂತಹ ಅಗತ್ಯ ಇದೆ. ಸ್ತ್ರೀವಾದಿ ಸಂಪ್ರದಾಯವನ್ನು ಹುಟ್ಟು ಹಾಕುವ ಲೇಖಿಕಿ ನಮ್ಮೊಳಗಿನಿಂದ ಇನ್ನೂ ಜನಿಸಿಲ್ಲ. ಅದಕ್ಕೆ ಪಕ್ವವಾಗಿರುವ ಸಾಂಸ್ಕೃತಿಕ ವಾತಾವರಣವನ್ನು ಹುಟ್ಟು ಹಾಕುವಲ್ಲಿ ಬರಹಗಾರ್ತಿಯರಾದಿಯಾಗಿ ಮಹಿಳಾ ಸಂಘಟನೆಗಳು ನಮ್ಮಲ್ಲಿ ಸಮರ್ಪಕವಾಗಿ ಕೆಲಸ ಮಾಡಿಲ್ಲವೇನೋ ? ಅಲ್ಲಿ–ಇಲ್ಲಿ ಸಣ್ಣ ಕತೆಗಳಲ್ಲಿ ಇಂತಹ ಸೃಜನಾತ್ಮಕತೆಯ ಪ್ರಯತ್ನಗಳು ಕಂಡು ಬಂದರೂ, ಗುಣಾತ್ಮಕವಾಗಿ ಗಮನಿಸಬಹುದಾದಂತಹ ಕಲಾಕೃತಿಗಳು ನಮ್ಮಲ್ಲಿ ಹುಟ್ಟಿಲ್ಲವೆನ್ನುವುದೇ ಕನ್ನಡದಲೇಖಕಿಯರ ಮುಂದಿರುವ ದೊಡ್ಡ ಸವಾಲಾಗಿದೆ.

# ಐದನೆಯ ರಾಷ್ಟ್ರೀಯ ಮಹಿಳಾ ಅಧಿವೇಶನಕ್ಕೆ ಮುನ್ನ

● ಎಚ್. ಎಸ್. ಸಿ.

1993ರಲ್ಲಿ ನಡೆಯಲಿರುವ ಐದನೆಯ ರಾಷ್ಟ್ರೀಯ ಮಹಿಳಾ ಸಮ್ಮೇಳನಕ್ಕೆ ಈಗಾಗಲೇ ಭಾರತದಲ್ಲಿ ಭರದಿಂದ ಸಿದ್ಧತೆಗಳು ನಡೆಯುತ್ತಿವೆ. ಕರ್ನಾಟಕದಲ್ಲಿನ ಮಹಿಳಾ ಸಂಘಟನೆಗಳ ಮಹಿಳೆಯರೂ ಸಹ ಉತ್ಸುಕತೆಯಿಂದ ಇದರ ಯೋಜನೆಯಡಿಯಲ್ಲಿ ಭಾಗಿಗಳಾಗತೊಡಗಿದ್ದಾರೆ. ಈ ಸಂದರ್ಭದಲ್ಲಿ ಮಹಿಳಾ ಚಳುವಳಿಯ ಸಾಧಕ ಭಾದಕಗಳ ಕುರಿತು ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳುವ ಅಗತ್ಯ ಇದೆ. ಮಹಿಳಾ ಚಳುವಳಿ ಎತ್ತ ಸಾಗಿದೆ? ಮೂರು ದಶಕದ ಮಹಿಳಾ ಚಳುವಳಿಯು ಮಹಿಳೆಯ ಬದುಕಿಗೆ ನಿಜವಾದ ಕೊಡುಗೆ ನೀಡಿದೆಯೇ ? ಸಾಮಾನ್ಯ ಮಹಿಳೆಯ ನಿತ್ಯದ ಬದುಕಿನ ಗೊಂದಲವನ್ನು ಆಕೆಗೆ ಮನಗಾಣಿಸದ, ಆಕೆಯನ್ನು ಚಳುವಳಿಯ ಪರಧಿಯೊಳಕ್ಕೆ ಎಳೆದುಕೊಳ್ಳದ, ಆಕೆಯ ಬದುಕಿನ ಆಶಯಕ್ಕೆ ಸ್ಫೂರ್ತಿಯಾಗದ ಮಹಿಳಾ ಚಳುವಳಿಯ ಸೋಲಿನ ಬಗ್ಗೆ ನಾವೆಲ್ಲರೂ ಆಳವಾಗಿ ಚಿಂತಿಸುವ ಅಗತ್ಯ ಇದೆ. ಪ್ರಾರಂಭಕ್ಕಾಗಿ ಒಂದು ಅನ್ನಿಸಿಕೆಯನ್ನು ಇಲ್ಲಿ ದಾಖಲಿಸುತ್ತಿದ್ದೇವೆ. ನಿಮ್ಮೆಲ್ಲರ ಅನಿಸಿಕೆ, ವಿಮರ್ಶೆಗೆ ಸ್ವಾಗತ.]

ಮಹಿಳಾ ಚಳುವಳಿಯ ಕುರಿತಾಗಿ ವೈಯಕ್ತಿಕವಾಗಿ ಎಲ್ಲಾದರೂ ನನ್ನ ಪಾಡಿಗೆ ನಾನು ಕುಳಿತು ಯೋಚಿಸುವಾಗಲೆಲ್ಲಾ ನನಗೆ ನೋವೆನಿಸುತ್ತದೆ. ಭಾರತದ ಸಂದರ್ಭದಲ್ಲಿ ಎಷ್ಟರ ಮಟ್ಟಿಗೆ ಈ ಚಳುವಳಿ ಮಹಿಳೆಯರನ್ನು ತನ್ನ ತೆಕ್ಕೆಯೊಳಕ್ಕೆ ಸೆಳೆದಿದೆ ಎಂಬ ಪ್ರಶ್ನೆಗಂತೂ ನಾವು ಉತ್ತರಿಸಲು ಕೂಡಾ ಆಗುವುದಿಲ್ಲ. ಕರ್ನಾಟಕದಲ್ಲಿಯಂತೂ 'ನಾನು ಫೆಮಿನಿಸ್ಟ್'–ಎಂದುಕೊಳ್ಳುವುದಕ್ಕೂ ಕೂಡಾ ಹಿಂದೆ-ಮುಂದೆ ನೋಡಬೇಕಾದಂತಹ ಸಂದರ್ಭ. 'ಫೆಮಿನಿಸ್ಟ್ ಅಥವಾ ಸ್ತ್ರೀವಾದಿ— ಎಂದರೆ ಗಂಡಸರ ವಿರೋಧಿ, ಲಘುವಾದ ಸ್ವಾತಂತ್ರ್ಯ ಪ್ರಿಯರು, ಪಾಶ್ಚಾತ್ಯರನ್ನು ಅನುಕರಿಸುವವರು ಎಂಬಷ್ಟೇ ಅರ್ಥದಲ್ಲಿ ಆಗಾಗ್ಗೆ ಜಿಜ್ಞಾಸೆ ನಡೆಯುವುದನ್ನು ನಮ್ಮ ಸುತ್ತ-ಮುತ್ತಲೂ ನಾವು ಕಾಣುತ್ತೇವೆ. ಮಹಿಳಾ ಚಳುವಳಿಯನ್ನು ಎಪ್ಪತ್ತರ ದಶಕದಲ್ಲಿ ಮಾತ್ರ ಏಕೆ-ಹಾಗೆ ನೋಡಿದರೆ ಇದರ ಬೇರನ್ನು ಅರವತ್ತರ ದಶಕದಲ್ಲಿಯೇ ನೋಡಬಹುದಾಗಿದೆ. ಸ್ವಾಯತ್ತತೆ ಹೊಂದಿದ ಮಹಿಳಾ ಸಂಘಟನೆಗಳು ದೆಹಲಿಯಂತಹ ಕೇಂದ್ರ ಪ್ರದೇಶಗಳಿಂದ ಹಿಡಿದು ಬೆಂಗಳೂರಿನಂತಹ ಎಲ್ಲಾ ರಾಜ್ಯ ಪಟ್ಟಣಗಳಲ್ಲೂ ತಲೆ ಎತ್ತಿವೆ. ಈ ಸಂಘಟನೆಗಳು ಈ ಮೂರು ದಶಕದಲ್ಲಿ ಸಾಕಷ್ಟು ಕೆಲಸ ಮಾಡಿವೆ. ವೈಯಕ್ತಿಕ ಬದುಕಿಗೆ ರಾಜಕೀಯ ನೆಲೆಯಲ್ಲಿ ಉತ್ತರ ಹುಡುಕುವಲ್ಲಿ ಈ ಸಂಘಟನೆಗಳು ಯಶಸ್ವಿಯಾಗಿವೆ, 'Perssonal is political' —ಎಂಬ ಸಿದ್ಧಾಂತದ ಹಿನ್ನೆಲೆಯಲ್ಲಿಯೇ ಮನೆಗೆಲಸ- ಹೆಂಡತಿಯನ್ನು ಹೊಡೆಯುವುದು, ವರದಕ್ಷಿಣೆ, ಅತ್ಯಾಚಾರ, ಅಸಮಾನ ಕೂಲಿ-ಇಂತಹ ಹತ್ತಾರು ಸಮಸ್ಯೆಗಳನ್ನು ಮಾಧ್ಯಮದ ಮೂಲಕ ಪ್ರಚಾರಕ್ಕೆ ತಂದಿರುವಲ್ಲಿ ಸಂಘಟನೆಗಳ ಕೊಡುಗೆ ಇದೆ. ವರದಕ್ಷಿಣೆ, ಅತ್ಯಾಚಾರಕ್ಕೆ ಸಂಬಂಧಿಸಿದ ಕಾನೂನುಗಳಲ್ಲಿ ಬಹುಶಃ ಈ ಮೂರು ದಶಕಗಳಲ್ಲಾದ ಬದಲಾವಣೆಗಳು ಯಾವಾಗಲೂ ಆಗಿಲ್ಲ. ಆದಾಗ್ಯೂ ನಾವು ಸಾಮಾನ್ಯ ಮಹಿಳೆಯರನ್ನು ತಲುಪುತ್ತಿಲ್ಲ. ಬಹು ಮಂದಿ ಮಹಿಳೆಯರನ್ನು ತನ್ನ ಪರಿಧಿಯೊಳಕ್ಕೆ ತಂದುಕೊಳ್ಳಲು ಮಹಿಳಾ ಚಳುವಳಿಗೆ ಸಾಧ್ಯವಾಗಿಲ್ಲ. ನಮ್ಮ ಸಂಘಟನೆ ಹಾಗೂ ನಮ್ಮ ತಾತ್ವಿಕ ಚಿಂತನೆಗಳಲ್ಲಿರುವ ಮಿತಿಗಳನ್ನು ಕುರಿತು ನಾವು ಬಹಳಷ್ಟು ಗಂಭೀರವಾಗಿ ಆಲೋಚಿಸಬೇಕಾದ ಸಂದರ್ಭ ನಮ್ಮ ಮುಂದಿದೆ.

ಕೆಲವು ದಿನಗಳ ಹಿಂದೆ ದೂರದ ಗೆಳೆಯರೊಬ್ಬರು ಬೆಂಗಳೂರಿಗೆ ಬಂದಿದ್ದರು. ಕರ್ನಾಟಕದಲ್ಲಿನ ಮಹಿಳಾ ಚಳುವಳಿಯ ಬಗ್ಗೆ ಅವರು ಬಹಳಷ್ಟು ಪ್ರಶ್ನೆಗಳನ್ನು ಎತ್ತಿದರು. ಎಷ್ಟರ ಮಟ್ಟಿಗೆ ಮಹಿಳಾ ಚಳುವಳಿ ಸಾಮಾನ್ಯ ಹೆಂಗಸರಲ್ಲಿ ಜಾಗೃತಿಯನ್ನು ಹುಟ್ಟು ಹಾಕಲು ಪ್ರಯತ್ನಿಸಿದೆ ? ಬೇರೆ ಬೇರೆ ಮಹಿಳಾ ಸಂಘಟನೆಗಳ ಮಧ್ಯ ಇರುವ ಸಂಬಂಧವೇನು ? ಅವು ಒಟ್ಟಾಗಿ ಕೆಲಸ ಮಾಡಲು ಸಾಧ್ಯವಿಲ್ಲವೇ ? ಈ ಸಂಘಟನೆಗಳು ವಿವಿಧ ರಾಜ್ಯದ ಮಹಿಳಾ ಸಂಘಟನೆಗಳೊಂದಿಗೆ ಹೇಗೆ ಸಂಪರ್ಕ ಇಟ್ಟುಕೊಂಡಿವೆ ? ಜೊತೆಗೆ ಇಂತಹ ಚಳುವಳಿಯ ಹಿನ್ನೆಲೆ ಮೌಲಿಕ ಸ್ತ್ರೀ-ವಾದಿ ಬರಹಗಳ ಸಾಹಿತ್ಯ/ ಇತರ ಬರಹಗಳ ಸೃಷ್ಟಿಗೆ ಪ್ರೇರಕ/ಪೂರಕವಾಗಿದೆಯೇ ? ಇತ್ಯಾದಿಯಾಗಿ ಅವರ ಪ್ರಶ್ನೆಗಳು.

ಈ ಪ್ರಶ್ನೆಗಳು ನಮಗೂ ಪ್ರಶ್ನೆಗಳಾಗಿಯೇ ಉಳಿದಿವೆ. ಕೆಲವೊಂದು ತಾತ್ವಿಕ ಚಿಂತನೆಗಳ ಹಿನ್ನೆಲೆಯಲ್ಲಿ ಹಲವಾರು ಸಂಘಟನೆಗಳು ಕೆಲಸ ಮಾಡುತ್ತಿವೆ. ಹೀಗೆ ತಾವು ಬದ್ಧವಾಗಿರುವ ತಾತ್ವಿಕ ಚಿಂತನೆಯ ಅಡಿಯಲ್ಲಿ ಈ ಸಂಘಟನೆಗಳು ತಮ್ಮನ್ನು ಕ್ರಿಯಾತ್ಮಕವಾಗಿ ತೊಡಗಿಸಿಕೊಂಡಿವೆಯೇ ? ಈ ಬದ್ಧತೆಯಿಂದಲೇ ಮಹಿಳೆಯರನ್ನು ಒಳಗೊಳ್ಳಲು ಎಷ್ಟು ಕ್ರಿಯಾತ್ಮಕವಾಗಿ ಈ ಸಂಘಟನೆಗಳು ತೊಡಗಿಕೊಂಡಿವೆ ? ಇಂತಹ ಪ್ರಶ್ನೆಗಳನ್ನು ನಮ್ಮನ್ನು ನಾವೇ ಕೇಳಿಕೊಳ್ಳಬೇಕಾದ ಸಂದರ್ಭ ಇದು.

ಇಂತಹ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಿದಾಗ ಈ ಕೆಳಕಂಡ ಕೆಲವು ಅಂಶಗಳು ಮಹತ್ವದ್ದು ಎಂದು ನನಗೆ ಅನ್ನಿಸುತ್ತದೆ.

**ತಾತ್ವಿಕತೆಯ ಕೊರತೆ :**

ಭಾರತದಲ್ಲಿ ಏಕೆ ಇಡಿಯ ಜಾಗತಿಕ ಸಂದರ್ಭದಲ್ಲಿಯೇ 'ಪಿತೃ-ಪ್ರಧಾನ' ಎಂಬ ವಿಚಾರದ ಬಗ್ಗೆ ಇನ್ನೂ ಜಿಜ್ಞಾಸೆಗಳು ನಡೆಯುತ್ತಿವೆ. ಕರ್ನಾಟಕದಲ್ಲಿಯಂತೂ ಇಂತಹ ವೈಚಾರಿಕ ಚಿಂತನೆಗಳೇ ಕಡಿಮೆ. ಬಹು ಪಾಲು ಸಂಘಟನೆಗಳು ಕ್ಯಾಪಿಟಲಿಸ್ಟ್-ಪೆಟ್ರಿಯರ್ಕಿಯ ವೈಚಾರಿಕ ಹಿನ್ನೆಲೆಯಲ್ಲಿ ಕೆಲಸ ಮಾಡುವುದರಿಂದ 'ಸೋಷಿಲಿಸ್ಟ್-ಫೆಮಿನಿಸ್ಟ್' ಎಂಬುದಾಗಿ ತಮ್ಮನ್ನು ತಾವು ಕರೆದುಕೊಳ್ಳುತ್ತಾರೆ. ಎಷ್ಟು ಸಂಘಟನೆಗಳು ಈ ಸಿದ್ಧಾಂತದ ಸ್ವರೂಪವನ್ನು ಬಿಡಿಸಲು ಯತ್ನಿಸಿವೆ ? ಎಷ್ಟರ ಮಟ್ಟಿಗಿನ ತೀವ್ರತೆಯಲ್ಲಿ ಕ್ರಿಯಾಶೀಲರಾಗಿ ಇದರ ಕಾರ್ಯವಿಧಾನದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ ? ಯಾವ ಸಮಸ್ಯೆಗಳ ಮೇಲೆ ಹೆಚ್ಚು ಒತ್ತು ನೀಡುವುದರಿಂದ ಕ್ಯಾಪಿಟಲಿಸ್ಟ್-ಪೆಟ್ರಿಯಾರ್ಕಿಯ ವಿವಿಧ ಸ್ವರೂಪಗಳನ್ನು ಹೋರಾಡಬಹುದು ? ಎಲ್ಲ ಸಮಸ್ಯೆಗಳನ್ನು, ಅಂದರೆ ಸಮಸ್ಯೆಗಳು ಬಂದ ಹಾಗೆ ಅವುಗಳನ್ನು ತೆಗೆದುಕೊಳ್ಳುವುದು. ಪರಿಹಾರಕ್ಕೆ ಪ್ರಯತ್ನಿಸುವುದು-ಇಷ್ಟರಲ್ಲಿ ಮುಗಿಯುವ ನಮ್ಮ ಪ್ರಯತ್ನಗಳಿಂದಾಗಿ ನಮ್ಮ ಸಂಘಟನೆಗಳು ಚಿತ್ರಾನ್ನವಾಗುತ್ತಿವೆ. ಕರ್ನಾಟಕದಲ್ಲಿ ಇಂದಿಗೂ ಸಹ ಈ ತಾತ್ವಿಕ ಹಿನ್ನೆಲೆಯ ಸ್ವರೂಪಕ್ಕೆ ಯಾವ ಯಾವ ಸಮಸ್ಯೆಯ ಆಳಕ್ಕೆ ಇಳಿಯಬೇಕು ಎನ್ನುವ ಚಿಂತನೆಗಳಂತೂ ತೀವ್ರ ಮಟ್ಟದಲ್ಲಿ ನಡೆಯುತ್ತಿಲ್ಲ. ಹಾಗಾಗಿ ಈ ಹಂತದಲ್ಲಿ ಕ್ರಿಯಾಶೀಲರಾಗುವ ಮುಖದತ್ತ ಕೂಡಾ ಹೆಜ್ಜೆ ಹಾಕುತ್ತಿಲ್ಲ. ಒಂದು ತಾತ್ವಿಕತೆಯ ವಿವಿಧ ಸ್ವರೂಪಗಳು ಕಾರ್ಯವಿಧಾನಗಳು ಬೆಳಕಿಗೆ ಬಂದಾಗ ಮಾತ್ರ ಹೋರಾಟದ ನೆಲೆ ಸ್ಪಷ್ಟವಾಗುವುದಷ್ಟೇ ಅಲ್ಲ ಆ ತಾತ್ವಿಕತೆ ಮಹಿಳೆಯ ವಿವಿಧ ಮುಖದ ಸಮಸ್ಯೆಗಳನ್ನು ತನ್ನೊಳಕ್ಕೆ ಒಳಗೊಳ್ಳಬಹುದು. ಇಂತಹ ಚರ್ಚೆಗಳು ಕರ್ನಾಟಕದ ಮಹಿಳಾ ಚಳುವಳಿಯ ಪರಿಧಿಯಲ್ಲಿ ನಡೆಯುತ್ತಲೇ ಇಲ್ಲ. ಇಂತಹ ಚರ್ಚೆಗಳೂ ಹಾಗೂ ಅದರ ಬಗ್ಗೆ ಹೆಚ್ಚಿನ ಅರಿವು ಬೆಳೆಸಿಕೊಳ್ಳದ ಸಂಘಟನೆಗಳು ಕಾರ್ಯವಿಧಾನದಲ್ಲಿ ಮಾತ್ರವಲ್ಲ, ಒಟ್ಟಾಗಿ ಹೋರಾಡಲೂ ಸೋಲುತ್ತಿವೆಯೇನೋ ಅನಿಸುತ್ತಿದೆ.

**ಸಂಘಟನೆಯ ಮಿತಿಗಳು :**

ಕರ್ನಾಟಕದಲ್ಲಿ ಎರಡು ಬಗೆಯ ಸಂಘಟನೆಗಳನ್ನು ನಾವು ಕಾಣಬಹುದು. ಇವೆಲ್ಲ 70 ಹಾಗೂ ಆ ನಂತರದ ದಶಕಗಳಲ್ಲಿ ಅಸ್ತಿತ್ವಕ್ಕೆ ಬಂದವುಗಳು. ಒಂದು ಬಗೆಯ ಸಂಘಟನೆಗಳಲ್ಲಿರುವ ಸದಸ್ಯರು ಪೂರ್ಣ ಸಮಯದ ಕಾರ್ಯಕರ್ತರಲ್ಲ. ಇವರು ಹೊರಗಡೆ ಸರ್ಕಾರಿ/ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡುವವರು. ತಮ್ಮ ಬಿಡುವಿನ ವೇಳೆಯಲ್ಲಿ ತಮ್ಮ ಸಂಘಟನೆಗಳಲ್ಲಿ ಕಾರ್ಯನಿರತರಾಗಿರುವವರು. ಇಂತಹ ಸಂಘಟನೆಗಳು ಹಮ್ಮಿಕೊಂಡ ಕಾರ್ಯ ಚಟುವಟಿಕೆಗಳು ಬಹಳಷ್ಟು ಕಡಿಮೆ. ವರ್ಷದಲ್ಲಿ ಎರಡು ಅಥವಾ ಮೂರು ಬಾರಿ ಸಾಹಿತ್ಯದ ಅಥವಾ ಮಹಿಳೆಯ ಇನ್ನಾವುದೋ ಸಮಸ್ಯೆಯ ಮೇಲೆ ಚರ್ಚೆ/ಸೆಮಿನಾರ್

ಏರ್ಪಡಿಸುತ್ತಾರೆ. ಮಾಸಿಕ ಅಥವಾ ದ್ವೈಮಾಸಿಕ ಮಹಿಳಾ ಪತ್ರಿಕೆ ತರುತ್ತಾರೆ. ವಾರದಲ್ಲಿ ಒಂದು ಬಾರಿ ಅಥವಾ ಹದಿನೈದು ದಿನಗಳಿಗೊಂದು ಬಾರಿ ಸದಸ್ಯರೇ ಒಟ್ಟಿಗೆ ಸೇರಿ ಚರ್ಚೆ ಇತ್ಯಾದಿಗಳಲ್ಲಿ ಭಾಗವಹಿಸುತ್ತಾರೆ. ಇಂತಹ ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿರುವ ಸದಸ್ಯರ ಸಂಖ್ಯೆ 10 ಇದ್ದರೆ ಅದೂ ಕೂಡಾ ಹೆಚ್ಚು. ಪೂರ್ಣ ಪ್ರಮಾಣದ ಕಾರ್ಯಕರ್ತರನ್ನು ನೇಮಿಸಿಕೊಳ್ಳಲು ಇವರಿಗೆ ಹಣದ ಅಡಚಣೆ ಅಡ್ಡಿ ಬರುತ್ತದೆ. ಇಂತಹ ಸಂಘಟನೆಗಳಲ್ಲಿರುವವರೆಲ್ಲ ಹೊರಗೆ ದುಡಿಯುವವರೇ ಆಗಿರುವುದರಿಂದ ಒಂದಿಷ್ಟು ಹಣ ಕೈಯಿಂದ ಹಾಕಿಯೋ ಅಥವಾ ಹೊರಗಡೆಯಿಂದ ಹಣ ಎತ್ತಿಯೋ ಕೆಲವಾರು ಚಟುವಟಿಕೆ ಹಮ್ಮಿಕೊಳ್ಳುತ್ತಾರೆ. ಈ ಸಂಘಟನೆಗಳು ಸರ್ಕಾರಿ ಅಥವಾ ಇನ್ನ್ಯಾವುದೇ ಏಜೆನ್ಸಿಗಳಿಂದ ಹಣದ ನೆರವಿಲ್ಲದೇ ಕೆಲಸ ಮಾಡುವ ಆಶಯ ಹೊಂದಿದವು. ಕಾಲದ ಮಿತಿ/ಹಣದ ಮಿತಿ/ಶ್ರಮದ ಮಿತಿಯಿಂದಾಗಿ ಇಂತಹ ಸಂಘಟನೆಗಳು ಸೀಮಿತ ಚಟುವಟಿಕೆಗಳನ್ನು ಮಾತ್ರ ಹಮ್ಮಿಕೊಳ್ಳುತ್ತಿವೆ. ಎರಡನೆಯ ರೀತಿಯ ಸಂಘಟನೆಗಳಲ್ಲಿರುವ ಬಹು ಪಾಲು ಕಾರ್ಯಶೀಲ ಮಹಿಳೆಯರು ಪೂರ್ಣ ಸಮಯದ ಕಾರ್ಯಕರ್ತರು. ಈ ಸಂಘಟನೆಗಳ ಕಾರ್ಯಕರ್ತರು ಪೂರ್ಣ ಸಮಯದ ಚಟುವಟಿಕೆಗೆ ತೊಡಗಿಸಿಕೊಂಡಿರುವುದರಿಂದ ಸರ್ಕಾರಿ ಅಥವಾ ಇತರ ಏಜೆನ್ಸಿಗಳಿಂದ ಹಣದ ನೆರವು ನಿರಂತರವಾಗಿ ಪಡೆಯುತ್ತಿರುತ್ತಾರೆ. ಇವು ಸಾಂಸ್ಥಿಕ ರಚನೆಯನ್ನು ಹೊಂದಿರುತ್ತಿವೆ. ಇಂತಲ್ಲಿ ಸಾಕಷ್ಟು ಕಾರ್ಯ ಚಟುವಟಿಕೆಗಳು ನಡೆಯುತ್ತಿವೆ. ಇವರು ಕೆಲವಾರು ಮಹಿಳೆಯರನ್ನೂ ಇಂತಹ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಶ್ರಮ/ಕಾಲ/ಹಣದ ಮಿತಿಗಳು ಮೇಲಿರುವ ಸಂಘಟನೆಗಳಿಗಿರುವಂತೆ ಈ ಸಂಘಟನೆಗಳಿಗೆ ಇರುವುದಿಲ್ಲ. ಒಂದು ರೀತಿಯ ಅರಿವಿನ ಹಂತದಲ್ಲಿ ಈ ಸಂಘಟನೆಗಳು ಕೊಡುಗೆ ಸಲ್ಲಿಸಿದರೂ ಚಳುವಳಿಯ ಒಳಗೆ ಅಧಿಕ ಪ್ರಮಾಣದಲ್ಲಿ ಮಹಿಳೆಯರನ್ನು ತೊಡಗಿಸಲು ಇವರಿಗೂ ಸಾಧ್ಯವಾಗುತ್ತಿಲ್ಲ. ಯಾಕೆಂದರೆ ಇವರ ಸಂಘಟನೆಗಳ ಸಾಂಸ್ಥಿಕ ಸ್ವರೂಪಗಳು ಇತರ ಮಹಿಳೆಯರಿಗೆ ಮಿತಿಯನ್ನೊಡ್ಡುತ್ತಿವೆ. ಹಾಗಾಗಿ ಎರಡೂ ತರಹದ ಸಂಘಟನೆಗಳೂ ಸಹ ಯಾವುದೇ ರೀತಿಯ ಮಾಸ್ ಬೇಸ್ ಮಹಿಳಾ ಚಳವಳಿಯನ್ನು ಹುಟ್ಟು ಹಾಕುವಲ್ಲಿ ನಿರಂತರವಾಗಿ ಸೋಲುತ್ತಿವೆ.

**ಸದಸ್ಯರ ಮಿತಿಗಳು :**

ಮಹಿಳಾ ಸಂಘಟನೆಗಳಲ್ಲಿರುವ ಹೆಚ್ಚು ಮಂದಿ ಮಹಿಳೆಯರು ಮಧ್ಯಮ/ಉನ್ನತ ಮಧ್ಯಮ ವರ್ಗದಿಂದ ಬಂದವರು. ಪಟ್ಟಣವಾಸಿಗಳು, ವಿದ್ಯಾವಂತರು. ಆಸಕ್ತಿಗಳೂ ಸಹ ಮಧ್ಯಮ ವರ್ಗದ ಆಶಯಗಳಲ್ಲೇ ಹುಟ್ಟಿಕೊಂಡವುಗಳು. ಇಂತಹ ಸದಸ್ಯರಿಂದ ಎಷ್ಟರ ಮಟ್ಟಿಗೆ ಮಾಸ್ ಬೇಸ್ ಹುಟ್ಟು ಹಾಕುವುದು ಸಾಧ್ಯವಾಗುತ್ತದೆ ಎಂಬುದೇ ಪ್ರಶ್ನೆ. ಇಂತಹವುಗಳಿಗೆ ಅಗತ್ಯವಾಗಿರುವ ಶಿಸ್ತು, ಸಂಯಮ, ಬದ್ಧತೆ ಈ ಮಹಿಳೆಯರಿಗೆ ಸಾಧ್ಯವಾಗುತ್ತಿದೆಯೇ ? ಮಧ್ಯಮ ವರ್ಗದ ಮಹಿಳೆಯರಂತೂ ಮನೆ ಮಕ್ಕಳು ಇಂತಹ ಸಮಸ್ಯೆಗಳೊಡನೆ ರಾಜಿ ಮಾಡಿಕೊಂಡೇ ಸಂಘಟನೆಗಳಲ್ಲಿ ಕೆಲಸ ಮಾಡಬೇಕಾಗುತ್ತದೆ. ಈ ಮೂರು ದಶಕದಲ್ಲಿ ಹತ್ತಿರದಿಂದ ಕಂಡ ಕ್ರಿಯಾಶೀಲ ಮಹಿಳೆಯರ ಮಿತಿಗಳನ್ನು ಅರ್ಥಮಾಡಿಕೊಳ್ಳಬಹುದಾಗಿದೆ. 70ರಲ್ಲಿ ಅತ್ಯಂತ ಕ್ರಿಯಾಶೀಲರಾದ ಮಹಿಳೆಯರೇ ಇಂದು ವಿಷ ವರ್ತುಲದಲ್ಲಿ ಗಿರಕಿ ಹೊಡೆಯುತ್ತಿದ್ದಾರೆ. ಮೂರು ದಶಕದ ಹೋರಾಟದ ಬದುಕಿನಲ್ಲಿ ನಮ್ಮನ್ನು ಗುರುತಿಸಿಕೊಳ್ಳಬಹುದಾದ, ನಮಗೆ ಆತ್ಮೀಯವಾಗುವ ಒಂದು ಸಾಂಸ್ಕೃತಿಕ ವಾತಾವರಣ ಹುಟ್ಟುಹಾಕಲು ಮಹಿಳಾ ಚಳುವಳಿಗೆ ಸಾಧ್ಯವಾಗಿಲ್ಲ. ಧ್ವನಿ ಎತ್ತಿದ ಕ್ರಿಯಾಶೀಲ ಮಹಿಳೆಯರು ಕ್ರಮೇಣವಾಗಿ ಒಂದೊಂದೆ ಹೆಜ್ಜೆ ಹಿಂದೆ ಸರಿದು ಈಗಾಗಲೇ ರೂಢಿಸಲ್ಪಟ್ಟ ಬದುಕಿನಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಪ್ರಾರಂಭಿಸಿದ್ದಾರೆ. ಇರುವ ನಾಲ್ಕೈದು ಮಹಿಳೆಯರ ಸ್ನೇಹ/ಸಹವಾಸದ ವಲಯದಲ್ಲಿ ಅಥವಾ ವೈಯಕ್ತಿಕವಾಗಿ ಹಲವಾರು ಬದಲಾವಣೆಗಳಲ್ಲೇ ತೃಪ್ತಿಪಟ್ಟುಕೊಳ್ಳುವಂತಹ ಸ್ಥಿತಿ ಸ್ತ್ರೀವಾದಿಗಳದಾಗಿದೆ. ಸಾರ್ವಜನಿಕ ಬದುಕಿನಲ್ಲಿ ಒಂದು ರೀತಿ ಎಲಿಯನೇಶನ್ ಅನುಭವಿಸುವ ಸ್ಥಿತಿ ಇವರದಾಗಿದೆ.

ಮಹಿಳೆಯರ ಬಗ್ಗೆ ಬರೆಯುವವರೂ ಸಹ ಈಗಾಗಲೇ ಹೆಸರು ಮಾಡಲ್ಪಟ್ಟ ಪಾಪ್ಯುಲರ್ ಮಾಧ್ಯಮಗಳಲ್ಲೇ ತಮ್ಮನ್ನು ಗುರುತಿಸಿಕೊಳ್ಳಬಯಸುತ್ತಾರೆ. ಗಂಭೀರವಾಗಿ ಬರೆಯುವ ಸಾಹಿತ್ಯ ಪ್ರಪಂಚದ ಮಹಿಳೆಯರಿಗಂತೂ ಮಹಿಳಾ ಸಂಘಟನೆಗಳೆಂದರೆ ಕೇವಲ ಕಾರ್ಯಕರ್ತರಿಗಾಗಿ ಮಾತ್ರವೇ ಎಂಬುಕೊಂಡಂತಿದೆ. ವರದಕ್ಷಿಣೆ,

ಅತ್ಯಾಚಾರ ಇಂತಹ ಸಮಸ್ಯೆಗಳ ವಿರುದ್ಧ ಮಾತ್ರ ಧ್ವನಿ ಎತ್ತಬಲ್ಲ ಕಾರ್ಯಕರ್ತರಿವರು ಎನ್ನುವ ಲಘುವಾದ ಭಾವನೆ ಇವರಿಗಿದೆ. ಇದಕ್ಕೆ ಅಪವಾದಗಳಿಲ್ಲವೆಂದಲ್ಲ. ಈ ಅಪವಾದಗಳಲ್ಲಿ ಬರುವ ಬರಹಗಾರ್ತಿಯರು ಬೆರಳೆಣಿಕೆಯಷ್ಟು ಮಾತ್ರ.

ಮಹಿಳಾ ಸಂಘಟನೆಗಳ ಬಗ್ಗೆ ತಾತ್ವಿಕ ಚರ್ಚೆಯನ್ನು ಹುಟ್ಟು ಹಾಕುವುದು, ಕಾರ್ಯವಿಧಾನ ಹಮ್ಮಿಕೊಳ್ಳುವ ಅಗತ್ಯದ ಬಗ್ಗೆ ನಾವು ಗಂಭೀರವಾಗಿ ಚಿಂತನೆಗೆ ತೊಡಗಬೇಕಾಗಿದೆ.

ಅಮೇರಿಕೆಯಲ್ಲಿ ಈಗಾಗಲೇ ಸ್ತ್ರೀವಾದಿ ಚಳುವಳಿಯ ಬಗ್ಗೆಯೇ ಒಂದು ರೀತಿಯ ಮುಜುಗರದ ವಾತಾವರಣವನ್ನು ಸೃಷ್ಟಿ ಮಾಡಲಾಗುತ್ತಿದೆ: 30ರ ದಶಕದಲ್ಲಿ ಅಮೇರಿಕೆಯಲ್ಲಿ ಮಹಿಳೆಯ ಸ್ವಾತಂತ್ರ್ಯಪರ ವ್ಯಕ್ತಿತ್ವವನ್ನು ಎತ್ತಿಹಿಡಿದು ಆಕೆಗೊಂದು ಹೊಸ ಮುಖವನ್ನೇ ಸೃಷ್ಟಿಸಿದ ಮಾಧ್ಯಮಗಳೇ 40ರ ದಶಕದಲ್ಲಿ ಯುದ್ಧದಿಂದ ಮರಳಿದ ಪುರುಷರಿಗೆ ಮಹಿಳೆಯರು ಉದ್ಯೋಗ ರಂಗದಲ್ಲಿ ಸವಾಲಾಗಬಾರದೆಂಬ ದೃಷ್ಟಿಯಿಂದ ಮನೆಯ ವಾತಾವರಣದೊಳಗೇ ತೃಪ್ತಿ ಪಡುವ ಹೆಣ್ಣಿನ ಮುಖಕ್ಕೆ ಪ್ರಾಮುಖ್ಯತೆ ನೀಡಲಾಯಿತು. 60ರ ದಶಕದಲ್ಲಿ ಮತ್ತೆ ಸ್ವಾತಂತ್ರ್ಯಪ್ರಿಯತೆಯತ್ತ ಸೆಳೆಯುವ ಜಾಲ ಹರಡಿದರೆ, ಈಗ 90ರ ದಶಕದಲ್ಲಿ ಮತ್ತೆ ಮನೆಗೆ ಅಂಟಿಕೊಳ್ಳುವ ವ್ಯಕ್ತಿತ್ವ ಬೆಳೆಸುವ ಪ್ರಯತ್ನಗಳು ನಡೆಯುತ್ತಿವೆ. ಬೆಟ್ಟಿ ಫ್ರೀಡನ್ ರವರಂತಹ ಸ್ತ್ರೀ ವಾದಿಗಳೂ ಸಹ ಇಂತಹ ವಿಚಾರಧಾರೆಗಳಿಗೆ ಪ್ರೇರಕ ಶಕ್ತಿಯಾಗುತ್ತಿದ್ದಾರೆ. ಅಮೇರಿಕಾದ ಆರ್ಥಿಕ/ರಾಜಕೀಯ ಸಂದರ್ಭದಲ್ಲಿ ಆಗೀಗ ಹೊಸ ಹೊಸ ಮುಖ ಧರಿಸಿಕೊಂಡು ಬರುವ ಚಳುವಳಿಯನ್ನು ಗಮನಿಸಿದಾಗ ಮೂರನೇ ಜಗತ್ತಿನ ವಾತಾವರಣದಲ್ಲಿ ಭಯ ಮೂಡುತ್ತದೆ. ಅಪ್ರಬುದ್ಧತೆಯಿಂದ ಇಂತಹ ಅಲೆಗಳಿಗೆ ಸಿಕ್ಕಿಕೊಳ್ಳುವ ಮೊದಲೇ ನಾವು ನಮ್ಮ ಚಳುವಳಿಯ ಬಗ್ಗೆ ಗಂಭೀರವಾಗಿ ಕುಳಿತು ಆಲೋಚನೆ ನಡೆಸುವ ಅಗತ್ಯ ಇದೆ. ಕ್ಯಾಪಿಟಲಿಸ್ಟ್-ಪೇಟ್ರಿಯಾರ್ಕಿಯ ವಿವಿಧ ಸ್ವರೂಪಗಳನ್ನು/ಅದರ ಕಾರ್ಯವಿಧಾನಗಳನ್ನು ಚಿಂತಿಸುವ ಅಗತ್ಯ ಜರೂರಿಯದ್ದಾಗಿದೆ.

ಕರ್ನಾಟಕದಲ್ಲಿ ಈಗೊಂದು ವರ್ಷದ ಹಿಂದೆ ಬಸ್‌ಗಳಲ್ಲಿ ಮೀಸಲಾತಿ ಕಾನೂನು ಜಾರಿಗೆ ಬಂತು. ನಾವ್ಯಾಪವೆ ಜಾಗೃತರಾಗಿ ಹೋರಾಡಿದೆವು ? ಕರ್ನಾಟಕದಲ್ಲಿನ ಎಷ್ಟು ಮಹಿಳಾ ಸಂಘಟನೆಗಳು ಇದರಲ್ಲಿ ಕಾರ್ಯಶೀಲವಾದವು ? ಪತ್ರಿಕೆಗಳಲ್ಲಿ ಬರೆಯುವುದನ್ನು ಬಿಟ್ಟರೆ ಯಾವ ಸಂಘಟನೆಗಳು ಇದರ ಬಗ್ಗೆ ಚಕಾರವೆತ್ತಲಿಲ್ಲ. ಯಾವ ರೀತಿಯ ಕ್ರಿಯಾಶೀಲ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಿಲ್ಲ. ಒಂದೆರಡು ತಿಂಗಳು ಬೆಂಗಳೂರಿನ ಎಲ್ಲಾ ಸಂಘಟನೆಗಳು ಒಟ್ಟಾಗಿ ಹೋರಾಡಿದ್ದರೆ ಗ್ರಾಮಾಂತರ ಹಾಗೂ ಪಟ್ಟಣ ವಾಸಿ ದುಡಿಯುವ ಹೆಂಗಸರಿಗೆ ಇದು ನೆರವಾಗುತ್ತಿತ್ತು. ಕಾರ್ಯಕ್ರಮ ಹಮ್ಮಿಕೊಂಡಿದ್ದರೆ ಅಸಂಘಟಿತ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಮಹಿಳೆಯರಿಂದ ಹಿಡಿದು ಆಫೀಸ್/ಕಾರ್ಖಾನೆಗಳಲ್ಲಿ ದುಡಿಯುವ ಹೆಂಗಸರನ್ನು ಇಲ್ಲಿ ಒಳಗೊಳ್ಳಬಹುದಾಗಿತ್ತು. ಆದರೆ ಯಾವ ಮಹಿಳಾ ಸಂಘಟನೆಗಳೂ ಈ ಬಗ್ಗೆ ಚಕಾರವೆತ್ತಲಿಲ್ಲ. ಮೊದಮೊದಲು ಬಸ್ಸುಗಳಲ್ಲಿ ಧ್ವನಿ ಎತ್ತುತ್ತಿದ್ದ ಮಹಿಳೆಯರು ಇಂತಹ ಸಂಘಟಿತ ಹೋರಾಟದ ಗೈರು ಹಾಜರಿಯಲ್ಲಿ ವೈಯುಕ್ತಿಕ/ಬೇರೆ ಕುಹಕಗಳಿಗೆ ಒಳಗಾಗಿ ಮಾತನಾಡುವ ಪ್ರಯತ್ನವನ್ನೇ ಬಿಟ್ಟು ನಿಂತುಕೊಂಡೇ ಪ್ರಯಾಣ ಮಾಡುತ್ತಾರೆ. ಚಾರಿತ್ರಿಕವಾಗಿ ನಾವು ಉಳಿಸಿಕೊಳ್ಳಬೇಕಾದುದನ್ನು ನಮ್ಮ ಮಿತಿಗಳಿಂದಾಗಿ ನಾವೇ ಕಳೆದುಕೊಂಡಿದ್ದೇವೆ/ಕಳೆದುಕೊಳ್ಳುತ್ತಿದ್ದೇವೆ. ದುಡಿಯುವ ಮಹಿಳೆಯರಿಗೆ ಇಂತಹ ಸವಲತ್ತುಗಳು ತುಂಬಾ ಅಗತ್ಯ, ಯಾಕೆಂದರೆ ಕೌಟುಂಬಿಕ ಚೌಕಟ್ಟಿನಲ್ಲಿ ಹೆಂಗಸರ ಇಬ್ಬಗೆಯ ಕೆಲಸದ ಹೊರೆ ತಪ್ಪಿಸುವಂತಹ ಯಾವುದೇ ಗಣನೀಯ ಬದಲಾವಣೆಯ ಬಗ್ಗೆ ರಾಜ್ಯ/ಸರ್ಕಾರಗಳು ತಲೆಕೆಡಿಸಿಕೊಳ್ಳುವುದಿಲ್ಲ. ಕ್ಯೂಬಾದಲ್ಲಿ ಗಂಡ ಮನೆಕೆಲಸದಲ್ಲಿ ನೆರವಾಗದಿದ್ದರೆ ಮಹಿಳೆ ಕಾನೂನಿನ ಮೊರೆ ಹೋಗಬಹುದು. ಇಂತಹ ಪ್ರಶ್ನೆಗಳು ನಮ್ಮಲ್ಲಿ ಕೇವಲ ವಿಡಂಬಿಸಲ್ಪಡುತ್ತವೆ ಅಷ್ಟೇ.

1990ರಲ್ಲಿ ಕ್ಯಾಲಿಕಟ್‌ನಲ್ಲಿ ನಡೆದ 4ನೆಯ ಮಹಿಳಾ ಅಧಿವೇಶನದಲ್ಲಿ 'ಕಮ್ಯುನಲಿಸಂ'-ನ ಬಗ್ಗೆಗಿನ ಚರ್ಚೆಗೆ ಆದ್ಯತೆ ನೀಡಲಾಗಿತ್ತು. ಆರ್. ಎಸ್. ಎಸ್ ನಂತಹ ಮತೀಯ ಸಂಘಟನೆಗಳ ಧ್ವನಿ/ ಬಲ ಇರುವುದು ಎಲ್ಲಿ ? ಹಳ್ಳಿಯ ತೀರಾ ಮುಗ್ಧರನ್ನೂ ತಲುಪುವ ಇವರ ಕಾರ್ಯವಿಧಾನಗಳೇನು ? ಇಂತಹ ಪ್ರಶ್ನೆ ಬಂದಾಗ ಮತೀಯ ಭಾವನೆಯ ವಿಚಾರಗಳು ಜನರಿಗೆ ಸುಲಭವಾಗಿ/ಸರಳವಾಗಿ

ಹಿಡಿಸುವುದರಿಂದ ಜನರನ್ನು ಸಂಘಟಿಸುವುದು ಸುಲಭ ವಾಗುತ್ತದೆ ಎಂಬ ಮಾತು ಒಪ್ಪಿತವಾದರೂ,ಆರ್. ಎಸ್. ಎಸ್. ರವರ ಶಿಸ್ತು, ಕಾರ್ಯದಕ್ಷತೆಯ ಬಗ್ಗೆ ಯಾರೂ ಎರಡು ಮಾತನಾಡಲಾರರು. ಇಂತಹ ಶಿಸ್ತು, ಕಾರ್ಯ ದಕ್ಷತೆಗಳಿಂದ ಸಂಘಟನೆಗಳನ್ನು ಬೆಳೆಸಿದಾಗ ಮಾತ್ರ ಮತೀಯ ಗುಂಪುಗಾರಿಕೆ ಬೆಳೆಸುವ ಆರ್. ಎಸ್. ಎಸ್ ನಂತಹ ಪ್ರಾಬಲ್ಯ ಸಂಘಟನೆಗಳಿಗೆ ಉತ್ತರವಾಗಿ ಬೆಳೆಯ ಬಹುದು ಎಂಬುದಾಗಿ ಭಾರತದ ಬಹುತೇಕ ಮಹಿಳಾ ಸಂಘಟನೆಗಳು ಅಭಿಪ್ರಾಯ ಪಟ್ಟವು. ಈ ನಿಟ್ಟಿನಲ್ಲಿ ನಾವು ಕಾರ್ಯ ಪ್ರವೃತ್ತರಾಗಿದ್ದೇವೆಯೇ ?

ಬೆಂಗಳೂರಿನಿಂದ 400 ಮೈಲಿ ದೂರವಿರುವ ಊರಿಗೆ ಹೋದಾಗ ನಾನು ಕಂಡ ದೃಶ್ಯವಿದು. ಈ ಹಳ್ಳಿಯಲ್ಲಿ ಸುಮಾರು ಹದಿನೈದು ದಿನ ತಂಗಿದ್ದೆ. ಈ ಹದಿನೈದು ದಿನಗಳಲ್ಲೂ ಆರ್. ಎಸ್. ಎಸ್‌ನವರು ಒಂದು ಬೇಸಿಗೆಯ ಶಿಬಿರ ಮಕ್ಕಳಿಗಾಗಿ ಏರ್ಪಡಿಸಿದ್ದರು. ಇವರ ಕಾರ್ಯ ಚಟುವಟಿಕೆಯ ವೈಖರಿ, ಶಿಸ್ತು, ಸಂಯಮ ಕಂಡಾಗ ಒಂದು ರೀತಿಯ ವಿಸ್ಮಯ ಉಂಟಾಯಿತು. ಮತೀಯ ಬೇಧವನ್ನು ಹುಟ್ಟುಹಾಕುವ ಆರ್. ಎಸ್. ಎಸ್. ನಾವೆಲ್ಲರೂ ಬಯ್ಯುತ್ತೇವೆ ನಿಜ. ಅಂತಹ ಸಂಘಟನೆ ಮತೀಯ ಅಂಧಕಾರ ಬೆಳೆಸುತ್ತಿದೆ ಎಂಬುದು ನಿಜ. ಆದರೆ ಅಂತಹ ಸಂಘಟನೆಗೆ ಪ್ರತಿರೋಧವಾಗಿ ಆ ಶಿಸ್ತು, ಸಭ್ಯತೆಯಿಂದ ನಾವು ಸಂಘಟನೆ ಕಟ್ಟುತ್ತಿದ್ದೇವೆಯೇ ? ಬೆಳೆಸುತ್ತಿದ್ದೇವೆಯೇ ? ಹಳ್ಳಿ ಹಳ್ಳಿಗಳಲ್ಲಿ ದುಡಿಯುವ ಕಾರ್ಯಕರ್ತರನ್ನು ನಾವು ಹೊಂದಿದ್ದೇವೆಯೇ ?

ಕ್ಯಾಲಿಕಟ್‌ನಲ್ಲಿ ಮಹಿಳಾ ಅಧಿವೇಶನ ನಡೆದ ಮೇಲೆ ಸಂಘಟನೆಗಳನ್ನು ಬೆಳೆಸುವ ತೀವ್ರ ಪ್ರಯತ್ನ ನಮ್ಮಲ್ಲಿ ನಡೆದಿದೆಯೇ ? ಯಾಕೆ ನಾವು ಸಂಘಟನೆಗಳಲ್ಲಿ ಜಾಗೃತ ರಾಗಿಲ್ಲ ? ಮೂರು ದಶಕದ ಅನುಭವಗಳು ನಮ್ಮಲ್ಲಿ ಯಾಕೆ ಸ್ಪಷ್ಟತೆ ತಂದಿಲ್ಲ? ಏನನ್ನು, ಯಾವುದನ್ನು ಮುಖ್ಯ ವಾಗಿ ಹೋರಾಡಬೇಕೆಂಬುದನ್ನು ಯಾಕೆ ಈ ಅನುಭವ ಗಳು ನಮಗೆ ಕಲಿಸಲಿಲ್ಲ ?

ಐದನೆಯ ಮಹಿಳಾ ಸಮ್ಮೇಳನ 1993-94ರಲ್ಲಿ ನಡೆಯಬೇಕು. ಅದರಲ್ಲಿ ಭಾಗವಹಿಸಲು ತರಾತುರಿ ಯಾಗಿರುವ ನಾವೆಲ್ಲರೂ ಇಂತಹ ಪ್ರಶ್ನೆಗಳ ಕಡೆಗೆ ಗಮನವಿಟ್ಟು ಚಿಂತಿಸುವ/ಕ್ರಿಯಾಶೀಲರಾಗುವ ಅಗತ್ಯ ಇದೆಯೆಂದು ನಿಮಗನಿಸುವುದಿಲ್ಲವೇ ?

---

## ನಾನು ಬಂಧಿ

ಕಾಣಲಿಲ್ಲ ನನ್ನನ್ನು
ಬಂಧಿಸಿದ ಸರಪಳಿಗಳು
ತೆರೆದ ಬಾಗಿಲಿನಲ್ಲಿಲ್ಲ
ಕಾವಲುಗಾರರ ಸಾಲು
ಆದರೂ ನಾನು ಬಂಧಿ

ಯಾವ ನ್ಯಾಯಾಲಯದ
ಕಟಕಟೆಯಲ್ಲೂ ನಿಂತಿಲ್ಲ
ತಪ್ಪು ನ್ಯಾಯಾಧೀಶರ
ಎದುರು ಸಾಬೀತಾಗಿಲ್ಲ
ಆದರೂ ನಾನು ಅಪರಾಧಿ
ನಾನು ಅಪರಾಧಿ

ಸುತ್ತಲೂ ನಗುವವರ
ಕೇಕೆಗೆ ಕೊರತೆಯಿಲ್ಲ
ಜೊತೆಯಾಗುವ ಭರವಸೆಗಳ
ಉತ್ಸಾಹ ಸುಳ್ಳಲ್ಲ
ಆದರೂ ನಾನು ಒಂಟಿ
ನಾನು ಒಂಟಿ

ಸೂರ್ಯ ನೀಡುವ
ಬೆಳಕಿನಲಿ ಬೇಧವಿಲ್ಲ
ಚಂದ್ರನ ಬೆಳದಿಂಗಳು
ಅಂಗಳದಲಿ ಹಾಡದಿಲ್ಲ
ಆದರೂ ಬದುಕು ಕತ್ತಲು
ಬರೀ ಕತ್ತಲು

● ಉಜ್ವಲಾ ಪುಣಜಗೌಡ

# ದಾಖಲೆ ಸಾಧಿಸಿದ ಜಾನಕಿ

● ಗೀತಾ ಜಿ. ಎಸ್.

ಹೆಣ್ಣೆಂದರೇ ತಾತ್ಸಾರ. ಹೆಣ್ಣುಮಕ್ಕಳನ್ನು ಜನ್ಮಾಂತರದ ಶಾಪದ ಫಲ ಎಂದು ಭ್ರಮಿಸಿ, ತಿರಸ್ಕರಿಸುವವರೂ ಇದ್ದಾರೆ ನಮ್ಮಲ್ಲಿ. ಈ ವಿಷಯದಲ್ಲಿ ವಿದ್ಯಾವಂತ ಅವಿದ್ಯಾವಂತರೆಂಬ ಭೇದವೇ ಇಲ್ಲ. ಮಗಳು ಹುಟ್ಟಿದಾಗ ಹೆತ್ತವಳನ್ನು ಆ ತಪ್ಪಿಗೆ ದೂರುವ ಅತ್ತೆ, ಮಾವ, ಗಂಡಂದಿರಿದ್ದಂತೇ ಮುಂದೆ ಮಾಡಬೇಕಾದ ಮದುವೆ, ವರದಕ್ಷಿಣೆಗಳ ಭಾರವನ್ನು ಊಹಿಸಿ, ಪಟ್ಟಣಿಗರು ನಾಗರಿಕರು ಗರ್ಭದಲ್ಲೆ ಹೊಸಕಿಬಿಡುತ್ತಾರೆ. 20ನೇ ಶತಮಾನದಲ್ಲಿದ್ದೇವೆ, ಮುಂದುವರೆದಿದ್ದೇವೆ ಎಂದೆಲ್ಲ ಗುರುತಿಸಿಕೊಳ್ಳುವವರಿಗೂ ಮಗ/ಮಗಳ ಬಗೆಗಿನ ಪೂರ್ವಾಗ್ರಹ ದೂರವಾಗಿಲ್ಲ. ಇಂಥ ಸಾಮಾಜಿಕ ಪರಿಸ್ಥಿತಿಯಲ್ಲಿ ಹುಟ್ಟಿದ ಹೆಣ್ಣು ಮಗುವಿಗೇನಾದರೂ ಅಂಗವಿಕಲತೆ ತಲೆದೋರಿದರೆ ಅವಳನ್ನು ಸಮಾಜ ಹೇಗೆ ನಡೆಸಿಕೊಳ್ಳಬಹುದು ಎಂಬುದನ್ನು ಊಹಿಸಲೂ ಅಸಾಧ್ಯ.

ಏಕೆಂದರೆ ಪ್ರತಿಯೊಂದನ್ನೂ, ಎಂದರೆ ಹೆಣ್ಣಿನ ಜೀವನದ ಪ್ರತಿ ಹಂತವನ್ನೂ 'ಮದುವೆ'ಯ ದೃಷ್ಟಿಯಿಂದಲೇ ವಿಶ್ಲೇಷಿಸುವ ಚಾಳಿ ಇರುವ ನಮ್ಮಲ್ಲಿ ಅಂಗವಿಕಲ ಹೆಣ್ಣು ಮಗಳನ್ನು ಅದೇ ದೃಷ್ಟಿಯಿಂದ ತೂಗಿನೋಡುತ್ತದೆ. ಆಕೆಯ ಬಗೆಗೆ ಮೃದು ಧೋರಣೆ ತಾಳುವುದು ಅಪರೂಪ. ತಾಯ್ತಂದೆಯರು ಧೈರ್ಯಸ್ಥರಾಗಿದ್ದರೂ ಅವರನ್ನೂ ಕಂಗೆಡಿಸಿಬಿಡುವ ಜಾಣರಿದ್ದಾರೆ. ಈ ಎಲ್ಲವನ್ನೂ ಮೆಟ್ಟಿನಿಂತು, ತಮ್ಮ ವ್ಯಕ್ತಿತ್ವಕ್ಕೂ ಒಂದು ಮೌಲ್ಯ, ಮೆರಗನ್ನು ತಂದುಕೊಂಡ ಅಂಗವಿಕಲ ಸಾಹಸಿಗಳು ಈಗೀಗ ಬೆಳಕಿಗೆ ಬರುತ್ತಿದ್ದಾರೆ. ಈ ಊನವಿಲ್ಲದ ಅವರುಗಳ ಸಾಧನೆ ಸಮಾಜದ ಕಣ್ತೆರೆಸುವುದಷ್ಟೇ ಅಲ್ಲ, ಪ್ರೋತ್ಸಾಹ ಸಿಕ್ಕರೆ ತಾವು ಯಾರಿಗೂ ಕಡಿಮೆ ಇಲ್ಲ ಎಂದು ಸಾಧಿಸುತ್ತಿದ್ದಾರೆ. ಈ ರೀತಿಯ ಆತ್ಮವಿಶ್ವಾಸ, ಸಾಹಸ ಮನೋಭಾವದವರಲ್ಲಿ ಸಿ. ಎನ್. ಜಾನಕಿಯೂ ಒಬ್ಬರು. ಕಾಲು ಸೊಂಟಗಳಲ್ಲಿ ಬಲವೇ ಇಲ್ಲದೆ, ಒಂದು ತೋಳೂ ಸಹ ಶಕ್ತಿಗುಂದಿ ಅಸಹಕಾರ ತೋರಿದರೂ ಜುಲೈ 28ರಂದು ಇಂಗ್ಲೆಂಡಿನ ಡೋವರ್ ಬಂದರಿನಲ್ಲಿ ಇಂಗ್ಲಿಷ್ ಕಡಲ್ಗಾಲುವೆಯನ್ನು ಈಜಿದ ಪ್ರಥಮ (ವಿಶ್ವಕ್ಕೆ) ಅಂಗವಿಕಲ ಮಹಿಳೆ ಎಂಬ ಬಿರುದಿಗೆ ಪಾತ್ರರಾದರು. ಈ ಮಹಿಳೆ ಕನ್ನಡತಿ ಎಂಬುದು ನಿಜಕ್ಕೂ ನಮಗೆಲ್ಲ ಹೆಮ್ಮೆಯ ವಿಷಯ.

2 ವರ್ಷದ ಪುಟ್ಟ ಹಸುಳೆಗೆ ಪೋಲಿಯೋ ಬಡಿದು ಜಾನಕಿಯ ಸೊಂಟದ ಕೆಳಭಾಗ ಸಂಪೂರ್ಣ ಬಲಹೀನವಾಯಿತು. ಆದರೆ ಆಕೆಯ ತಾಯಿ–ತಂದೆ ಧೃತಿಗೆಡಲಿಲ್ಲ. ಆಕೆಗೆ ಶಿಕ್ಷಣ ನೀಡಿದರು. ಸದಾ ನಾನಾ ರೀತಿಯ, ಆಕೆಗೆ ಸರಿಹೊಂದುವ ವ್ಯಾಯಾಮಗಳ ತರಬೇತಿ ನೀಡಿದರು. ಆಕೆಯಲ್ಲಿ ಅರಳುತ್ತಿದ್ದ ಆತ್ಮವಿಶ್ವಾಸಕ್ಕೆ ಸದಾ ಪ್ರೊತ್ಸಾಹ, ಬೆಂಬಲ ನೀಡುತ್ತಾ ಬಂದರು. ಇದಕ್ಕೆ ಪುಟವಿಟ್ಟಂತೆ ಪದವಿಯೂ ನಂತರ ಸಿಂಡಿಕೇಟ್ ಬ್ಯಾಂಕಿನ ನೌಕರಿಯೂ ದೊರೆಯಿತು. ಈ ಮಟ್ಟಿನ ಸಾಧನೆಗೆ ಆಕೆ ಪಟ್ಟಶ್ರಮ, ಹೆತ್ತವರು ನೀಡಿದ ಉತ್ತೇಜನವನ್ನು ಎಷ್ಟು ವಿವರಿಸಿ ಹೇಳಿದರೂ ಸಾಲದು.

ಆಕೆಯಲ್ಲಿ ಈಜು ಕಲಿವ ಪ್ರೇರಣೆ ಹುಟ್ಟಲು ಕಾರಣ ಚಿಕಮಗಳೂರಿನಲ್ಲಿ ನಡೆದ ಒಂದು ಬೇಸಿಗೆ ಶಿಬಿರ. ಅಲ್ಲಿ ನಡೆದ ಆ ಶಿಬಿರ ಸಂಪೂರ್ಣ ಅಂಗವಿಕಲರಿಗಾಗಿಯೇ ಮೀಸಲಾಗಿತ್ತು. ಅದರಲ್ಲಿ ಭಾಗವಹಿಸಲು ಹೋದ ಜಾನಕಿಗೆ, ತಮ್ಮಂತೇ ಗಾಲಿಕುರ್ಚಿಯನ್ನೇ ಸಂಗಾತಿಯನ್ನಾಗಿ ಮಾಡಿಕೊಂಡಿದ್ದವರು ತಮ್ಮ ಪರಾವಲಂಬಿತನವನ್ನು ತೊರೆದು ನೀರಿನಲ್ಲಿ ಮೀನಿನಂತೆ ಸ್ವತಂತ್ರವಾಗಿ ಈಜುತ್ತಿದ್ದುದನ್ನು ಕಂಡು ಅಚ್ಚರಿಗೊಂಡರು. ತಾವೂ ಅವರಂತೇ ನೀರಿನಲ್ಲಿ ಸ್ವಾತಂತ್ರ್ಯ ಪಡೆಯಬಾರದೇಕೆ ಎಂಬಾಸೆ ಅಂಕುರಿಸಿತು. ಆ ಆಸೆ ಕ್ಷಣಿಕವಾದುದಾಗಿರಲಿಲ್ಲ. ಛಲದ ರೂಪ ತಾಳಿ, ಆಡುವವರ ಮಾತಿಗೆ ಜಗ್ಗದೆ ಬೆಳದೇ ಬೆಳೆಯಿತು. ಮೊದಲು ಈಕೆ ಈಜು ಕಲಿವ ಆಸೆ ವ್ಯಕ್ತಪಡಿಸಿದಾಗ ಹೆತ್ತವರಿಗೆ ಆತಂಕವಾದುದು ಹೌದು. ನಂತರ ಆಕೆ ಬಸವನಗುಡಿಯ ಈಜುಕೊಳದ ಸದಸ್ಯೆಯಾಗಿ ಪ್ರತಿದಿನ ಈಕೆ ಈಜಿನಲ್ಲಿ ತೋರುತ್ತಿದ್ದ ಆಸಕ್ತಿ, ಆಸೆಗಳನ್ನು ಕಂಡು ನೆಮ್ಮದಿಯಾಯಿತು, ಆತಂಕ ದೂರವಾಯಿತು ಎನ್ನುತ್ತಾರೆ–ಈಕೆಯ ತಂದೆ. ಮಗಳೊಂದಿಗೆ ಕಣ್ಣಿನ ರೆಪ್ಪೆಯಂತೇ ಇರುತ್ತಿದ್ದ ಆಕೆಯ ತಾಯಿ ಇಂದಿರಮ್ಮ ಪ್ರತಿದಿನ ಮಗಳ ಪ್ರಗತಿಯನ್ನು ತಮ್ಮ ಪತಿಗೆ ಒಪ್ಪಿಸುತ್ತಿದ್ದರು. ಆಕೆಯ ಉತ್ಸಾಹ ಆಸಕ್ತಿ ಪರಿಶ್ರಮಗಳನ್ನು

ಕಂಡು NIS ಈಜು ತರಬೇತುದಾರರು ಈಕೆಗೆ ಈಜು ಕಲಿಸಲು ಮುಂದಾದರು. ಗೋಪಾಲ್‌ರ ಆದೇಶದ ಮೇರೆಗೆ ರಾಮ್‌ಸಿಂಗ್‌ರ ಮಾರ್ಗದರ್ಶನ ಈಕೆಗೆ ದೊರೆಯಿತಾದರೂ, ತರಬೇತಿಯಿಂದ ಈಕೆ ಕಲಿತದುದ ಕ್ಕಿಂತಲೂ ಪ್ರತಿದಿನವೂ ಇತರ ನುರಿತ ಈಜುಗಾರರ ಕೈಕಾಲುಗಳ ಚಲನವಲನ, ಉಸಿರಾಟಕ್ರಮ, ಇತ್ಯಾದಿ ಗಳಿಂದ ಸ್ಫೂರ್ತಿ ಪಡೆದಿದ್ದು ಹೆಚ್ಚು. ತಾವು ಇತರರಲ್ಲಿ ಕಂಡ ಅಂಶಗಳನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಯತ್ನಿಸಿದರು. ಮೊದಲ ಬಾರಿಗೇ ಈಕೆ ಯಶಸ್ವಿಯಾಗ ಈಕೆಗೆ ಚಿನ್ನದ ಪದಕವನ್ನು ದೊರಕಿಸಿಕೊಟ್ಟಿತು. ಸ್ವಾರಸ್ಯವೆಂದರೆ ಆ ಸ್ಪರ್ಧೆಯಲ್ಲಿ ಈಕೆಯೊಬ್ಬರೇ ಮಹಿಳಾ ಸ್ಪರ್ಧಿ. ಪುರುಷ (ಅಂಗವಿಕಲ) ಸ್ಪರ್ಧಿಗಳೊಂದಿಗೆ ಸರಿಸಮಾನವಾಗಿ ಸ್ಪರ್ಧಿಸಿ, ಪದಕ ಗಳಿಸಿದರು.

1992ರಲ್ಲಿ ಅಹಮದಾಬಾದ್‌ನಲ್ಲಿ ನಡೆದ ಈಜಿನ ಸ್ಪರ್ಧೆಯಲ್ಲೂ ಈಕೆಯದೇ ಪ್ರಥಮ ಸ್ಥಾನ. ಈಕೆಯು ಪದಕ ಗಳಿಕೆ ಈಜಿಗಷ್ಟೇ ಮೀಸಲಾಗಿರದೆ ಷಾಟ್‌ಪುಟ್, ಡಿಸ್ಕಸ್‌ಥ್ರೊ, ಇತ್ಯಾದಿಗಳಲ್ಲೂ ಬೆಳ್ಳಿ ಕಂಚಿನ ಪದಕ ಗಳನ್ನು ಪಡೆದಿದ್ದಾರೆ.

"ಬೆಳಿಗ್ಗೆ 4 ಗಂಟೆಗೆ ಮುಂಚೇನೆ ಎದ್ದು ಪ್ರಾಕ್ಟೀಸ್, ಮತ್ತೆ ಸಾಯಂಕಾಲ ಅಂದ್ರೆ ರಾತ್ರಿ ಅಂತ್ಲೆ ಅಂದ್ಕೊಳ್ಳಿ. ಯಾಕೇಂದ್ರೆ ಅಲ್ಲಿ 10°C. ಇರತ್ತೆ ಅಲ್ಲಿನ ನೀರು, ಅದಕ್ಕೆ ಒಗ್ಗಿಕೋ ಬೇಕಲ್ಲ" ಎಂದು ತಿಳಿಸಿದರು ಜಾನಕಿಯವರ ತಂದೆ. ಪೈಲಟ್ ಇರುವ ದೋಣಿ ಬಾಡಿಗೆಯೇ ದುಬಾರಿ. ಇದರ ವೆಚ್ಚವನ್ನು ಕ್ರಿಡಾಪಟುವೇ ವಹಿಸಬೇಕು. ನೀರಿನ ಕೊರೆಯುವ ಚಳಿಯನ್ನು ತಾಳಿಕೊಳ್ಳುವುದರೊಂದಿಗೆ (ಜಲಚರಗಳು ಸಸ್ಯಗಳ ಅಡೆತಡೆಯನ್ನೂ ನಿವಾರಿಸಿಕೊಳ್ಳುವ ಸಾಮರ್ಥ್ಯವಿರಬೇಕು) ಸತತವಾಗಿ ಈಗ 10 ಗಂಟೆಗಳ ಕಾಲ ಈಜುವ ಸಾಮರ್ಥ್ಯ, ಮೆಡಿಕಲ್ ಸರ್ಟಿಫಿಕೇಟ್ ಇವಿಷ್ಟೂ ಪ್ರತಿ ಪಟುವಿಗೂ ಇರಲೇಬೇಕಾದ ಅರ್ಹತೆ ಗಳು ಎಂದು ವಿವರಿಸಿದರು ನಾಗಪ್ಪ (ಜಾನಕಿಯ ತಂದೆ), ವಿಶ್ವದಲ್ಲೇ ಅತಿ ಸಂಚಾರ ಪ್ರದೇಶ (ಜಲಯಾನ) ವೆನಿಸಿರುವ ಈ ಕಾಲುವೆಯ ಮೂಲಕ ದಿನನಿತ್ಯ 500 ಹಡಗುಗಳಾದರೂ ಓಡಾಡುತ್ತವೆ ಎಂದು ನುಡಿದರು. 'ನಿಮ್ಮ ಮಗಳ ಈ ಸಾಧನೆ ಮಾಡಿದ ಬಗ್ಗೆ ನೀವೇನು ಹೇಳುವಿರಿ' ಎಂದು ಕೇಳಿದಾಗ, ಆಕೆಯ ತಾಯಿ ತಂದೆ ಇಬ್ಬರದೂ ಒಂದೇ ಉತ್ತರ–"ಅವಳು ಮೊದಲಿಂದ್ಲೂ ಹಾಗೇ. ಏನನ್ನಾದರೂ ಮನಸ್ಸಿನಲ್ಲಿ ಇಟ್ಕೊಂಡ್ಬಿಟ್ರೆ ಅದನ್ನ ಸಾಧಿಸೀ ಸಾಧಿಸ್ತಾಳೆ. ಅದು ಅವಳ ಸ್ವಭಾವ." "ಅಲ್ಲಿ ನಮಗೆಲ್ಲವೂ ಅನುಕೂಲವಾಗಿತ್ತು. ಇಲ್ಲಿಂದ ಹೋಗುವಾಗ, ಬರುವಾಗ, ಸ್ಪರ್ಧೆಗೆ ಬೇಕಾದ ಹಣ ಎಲ್ಲವನ್ನೂ ಹೊಂದಿಸಿ ಕೊಂಡು ಹೋದೆವು. ಅಲ್ಲಿನ ಜನರೂ ತುಂಬ ಸಹಕರಿಸಿದರು. ಆದ್ರೆ ಅಲ್ಲಿನ ಹವಾಮಾನ, ಆಹಾರ ನಮ್ಮಿಬ್ಬರಿಗೆ ಒಗ್ಗಲಿಲ್ಲ. ಎಷ್ಟು ಹೊತ್ತಿಗೆ ವಾಪಸ್ ಬರ್‍ತೀವಪ್ಪ ಅನ್ನಿಸಿಬಿಡ್ತು. ಅಲ್ಲಿ ಇಂಟರ್‌ವ್ಯೂಗೆ ಅಂತ ತುಂಬ ಜನ ಬಂದಿದ್ರು. ನಾವು ಅವಸರದಲ್ಲೆ ಮುಗಿಸಿ ಬಂದ್ವು" ಎನ್ನು ನಾಗಪ್ಪನವರ ಪ್ರಕಾರ ಅಲ್ಲಿನ ಪತ್ರಿಕೆಗಳು ಪ್ರತಿಯೊಂದನ್ನು ಸ್ವತಃ ಕಾದು ಪರೀಕ್ಷಿಸಿ, ನಿಜವೆನಿಸಿದರೆ ಮಾತ್ರವೇ ಅದನ್ನು ಪ್ರಚಾರ ಮಾಡುತ್ತಾರೆ, ಮತ್ತೆ ಯಾರೋ ಹೇಳಿದರೆಂದು ಅಥವಾ ಹೇಗಂತೆ ಹಾಗಂತೆ ಎಂಬ ಸುದ್ದಿಯಿಂದಲ್ಲ. ಆದ್ದರಿಂದಲೇ ನಮ್ಮಲ್ಲಿಗಿಂತ ಅಲ್ಲಿನ ಪತ್ರಿಕೆಗಳ ಸುದ್ದಿಗೆ ಹೆಚ್ಚು ಮಹತ್ತ್ವವಿರುತ್ತದೆ ಎಂದೆನ್ನುತ್ತಾರೆ.

ಲಿಲ್ಲವಾದರೂ, ಈಕೆಯ ಸಾಧನೆಯ ಫಲಕ್ಕೆ ಕೊನೆಗೆ ವಿಜಯ ದೊರೆಯಿತು. ರಾಷ್ಟ್ರೀಯ ಸ್ಪರ್ಧೆಗಳಲ್ಲಿ ಭಾಗ ವಹಿಸುವಷ್ಟು ಅರ್ಹತೆ ಗಳಿಸಿಕೊಂಡರು. 1985ರಲ್ಲಿ ನಡೆದ ಬೇಸಿಗೆ ಶಿಬಿರದ ನಂತರ ಕೈಗೊಂಡ ಈಕೆಯ ನಾಲ್ಕೂವರೆ ವರ್ಷಗಳ ಕಠಿಣ ಈಜು ಅಭ್ಯಾಸ 1989ರಲ್ಲಿ ನಾಸಿಯೋದಲ್ಲಿ ಏರ್ಪಡಿಸಿದ್ದ ಈಜು ಸ್ಪರ್ಧೆಯಲ್ಲಿ

ಭಾರತದ ಖ್ಯಾತ ಈಜುಪಟು ಅನಿತಾಸೂದ್ ಪರಿಚಯ ಇವರ ಈಜಿನ ಸಾಧನೆಗೊಂದು ದೊಡ್ಡ ಗುರಿಯನ್ನು ತೋರಿಸಿಕೊಟ್ಟಿತು. ಇಂಗ್ಲಿಷ್ ಕಡಲ್ಗಾಲುವೆ ಯನ್ನು ಈಜಿದ ಸಾಧನೆಗೆ ಜಾನಕಿಯನ್ನು ಪ್ರೇರೇಪಿಸಿ ದವರು ಆಕೆಯೇ, ಆ ಸ್ಪರ್ಧೆಗೆ ಭಾಗವಹಿಸಲು ಬೇಕಾದ ಅರ್ಹತೆ ಗಳಿಸಲು ಮಗಳು ನಿಂತರೆ, ತಂದೆ ಶ್ರೀ ಸಿ. ವಿ.

ನಾಗಪ್ಪ ಇಂಗ್ಲಿಷ್ ಕಡಲ್ಗಾಲುವೆಯ ಸ್ವಿಮ್ಮಿಂಗ್ ಅಸೋಸಿಯೇಷನ್ ಒಂದಿಗೆ ಪತ್ರವ್ಯವಹಾರದಲ್ಲಿ ತೊಡಗಿದರು. ಜಾನಕಿಯವರ ಈಜುವಿಕೆಯ ವೇಗ, ಉಸಿರಾಟದಲ್ಲಿನ ವೈಜ್ಞಾನಿಕ ಅಂಶಗಳನ್ನು ಗಮನಿಸಿಯೇ ಈ ಸಾಹಸಕ್ಕೆ ಆಕೆಯನ್ನು ಅನಿತಾಸೂದರವರು ಪ್ರೇರೇಪಿಸಿದರು.

ಜನರಲ್ ತಿಮ್ಮಯ್ಯ ಸಾಹಸ ಅಕಾಡೆಮಿಯವರು ಹಾಗು ಶ್ರೀಮತಿ ಲಕ್ಷ್ಮಿಸಿಜಾಮುದ್ದೀನ್‌ರ ನೆರವಿನಿಂದ ಮಲ್ಪೆಯ ಜಲಸಾಹಸ ಕ್ರೀಡಾ ಕೇಂದ್ರದಲ್ಲಿ 20 ದಿನಗಳ ತರಬೇತಿ ಪಡೆದರು. ಇಂಗ್ಲಿಷ್ ಕಡಲ್ಗಾಲುವೆ ಈಜಲು ಬೇಕಾದ ಮುಖ್ಯ ಅರ್ಹತೆಗಳಲ್ಲಿ ಸಮುದ್ರದ ಈಜಿನ ದೂರದ ಸೇಂಟ್ ಮೇರಿ ದ್ವೀಪಕ್ಕೆ ಈಜಿ ದಡದಲ್ಲಿ ನೆರೆದಿದ್ದ ಸಾವಿರಾರು ಮಂದಿಗೆ ಇನ್ನಿಲ್ಲದಷ್ಟು ಅಚ್ಚರಿ ತಂದಿದ್ದರು.

ಇದೇ ರೀತಿ ಈಕೆ ಹೋದೆಡೆಗಳಲ್ಲಿ, ಮೊದಲಿಗೆ 'ಈಕೆಗೆ ಇದು ಸಾಧ್ಯವೆ'? ಎಂಬ ಪ್ರಶ್ನೆ ಮೂಡುವುದು, ನಂತರ ಈಕೆಯ ಸಾಧನೆ ಕಂಡು ಮೂಗಿನ ಮೇಲೆ ಬೆರಳಿಡುವುದು ಇವೆರಡೂ ತೀರ ಸಾಮಾನ್ಯದ ಅನುಭವವಾಗಿದೆ. ಈ ಮಂದಿಗೆ ಲಂಡನ್ನಿನ ಡೋವರ್ ಬೀಚ್‌ನಲ್ಲೂ ಇದೇ ಹಾಡು. ಕೊರೆಯುವ ಚಳಿ, ಭೋರ್ಗರೆಯುವ ಭಾರೀ ಅಲೆಗಳ ಹೊಡೆತ, ಬಿರುಗಾಳಿ, ಸಮುದ್ರ ಸಸ್ಯಗಳ ಕಾಲ್ತೊಡಕು, ಸಮುದ್ರ ಜೀವಿಗಳ ಸವಾಲು

---

ಸಣ್ಣ ವಯಸ್ಸಿನಿಂದಲೇ ವ್ಯಾಯಾಮ (ಅಂಗ ವಿಕಲರಿಗೆ ಅಗತ್ಯವಿದ್ದಂಥ ಕೆಲವು) ಮಾಡುವ ಅಭ್ಯಾಸವಿತ್ತು ಜಾನಕಿಗೆ. ಅಂಗವಿಕಲರಿಗೇ ವಿಶೇಷವಾಗಿ ತಯಾರಾದ ಕಾರನ್ನು ಹೊಂದಿರುವ ಈಕೆಯೇ ಅದನ್ನು ಡ್ರೈವ್ ಮಾಡುತ್ತಾರೆ. ಹೀಗಾಗಿ ಈಕೆಗೆ ಮೊಬಿಲಿಟಿಯ ಅಭ್ಯಾಸವಿದ್ದು ಈಜು ಕಲಿಯಲು ಇವುಗಳಿಂದ ಸ್ವಲ್ಪ ಸಹಾಯವಾಯಿತು. ನಂತರ ಈಜಿಗೇ ಅಗತ್ಯವಾದಂಥ ವ್ಯಾಯಾಮಗಳನ್ನು ಕಂಠೀರವ ಸ್ಟೇಡಿಯಂನಲ್ಲಿ ಕಲಿತರು. ಜಿಮ್ನಾಸಿಯಂ ತರಬೇತಿಯನ್ನೂ ಪಡೆದರು. ಮೊದಲ ಬಾರಿ ಈಜು ಕಲಿಯಲು ಹೋದಾಗ ತಾವೇ ನೀರಿಗಿಳಿಸಿ ಕಾಲುಗಳನ್ನು ಆಡಿಸುವುದು, ರಾಡ್ ಹಿಡಿದು ನಿಲ್ಲಲೆತ್ನಿಸುವುದು...ಇತ್ಯಾದಿ ಯತ್ನ ನಡೆಸುತ್ತಿದ್ದರು. ಬೇರೆಯವರನ್ನು ಗಮನಿಸಿ ಅವರ ಅಭ್ಯಾಸಗಳಲ್ಲಿ ಕಂಡ ಅಂಶಗಳನ್ನು ಅಳವಡಿಸಿಕೊಳ್ಳಲೆತ್ನಿಸುತ್ತಿದ್ದರು. ಅ ಯತ್ನದಲ್ಲಿ ವಿಫಲರಾದರೂ ಬಿಡದೆ ಮುಂದುವರೆಸಿ, 'ಮರಳಿ ಯತ್ನಿಸಿ, ಮರಳಿ ಯತ್ನಿಸಿ' ಜಯಶಾಲಿಯಾಗುತ್ತಿದ್ದರು. ಈ 'ಭಗೀರಥ ಪ್ರಯತ್ನ'ದಂಥ ಗುಣ ಇವರಿಗೆ ರಕ್ತಗತವಾದುದರಿಂದಲೇ ಅತಿ ಕ್ಷಿಪ್ರಕಾಲದಲ್ಲೇ ಈಜಿ ಜಯಿಸಿದವರು, ಜಯಿಸಿ ದಾಖಲೆಯನ್ನೂ ಮಾಡಿದರು.)

---

ಅನುಭವವೂ ಒಂದು. ಅಲ್ಲಿ ದಿನೇಶ್ ಸುವರ್ಣರಿಂದ ನಿರೀಕ್ಷೆ ಮೀರಿ ಪ್ರೋತ್ಸಾಹ, ಧೈರ್ಯ ದೊರೆತು ತಮ್ಮ ಅರ್ಹತೆಯನ್ನು ಮೇಲಕ್ಕೇರಿಸಿಕೊಂಡರು. ಮಾನವ ನಿರ್ಮಿತ ಕೃತಕ ಈಜುಕೊಳಕ್ಕಿಂತ ಭಾರಿ ಅಲೆಗಳ ಸವಾಲನ್ನೆದುರಿಸಿ ಮುಂದೆ ಸಾಗಿ, ಸಾಗರದ ಮಾರುತನಿಗೆ ಬಗ್ಗದೆ, ಜಗ್ಗದೆ ಈಜುವ 'ಥ್ರಿಲ್' ಬಗ್ಗೆ ಈಕೆಯಿಂದಲೇ ಕೇಳಿ ತಿಳಿಯಬೇಕು. ಸಮುದ್ರದ ಈಜಿನ ಬಗ್ಗೆ ನೀವೇನು ಹೇಳುವಿರಿ ಎಂಬ ಪ್ರಶ್ನೆಗೆ 'ಓ! ತುಂಬಾ ಇಷ್ಟವಾಗುತ್ತೆ' ಎಂಬ ಮಾತಿಗಿಂತಲೂ ಗೆಲುವಿನ ಮಂದಹಾಸ ತುಂಬಿದ ಆಕೆಯ ಮುಖ ಇನ್ನೂ ಹೆಚ್ಚು ಅರ್ಥ ನೀಡುತ್ತದೆ. ಕೊನೆಯ ದಿನ ಈಕೆ ಮಲ್ಪೆಯ ಬೀಚಿನಿಂದ 20 ಕಿ.ಮಿ. ಇತ್ಯಾದಿ ನೈಸರ್ಗಿಕ ಅಡ್ಡಿ, ಆತಂಕಗಳೊಡನೆಯೇ ನೀರಿನ ಮೇಲ್ಪದರದ ಮೇಲಿನ ತೈಲದ ಪೊರೆ, ಬಿಡುವಿಲ್ಲದೆ ಓಡಾಡುವ ನೌಕಾ ಸಂಚಾರಗಳಂತಹ ಮಾನವ ನಿರ್ಮಿತ ಅಡೆತಡೆಗಳನ್ನೂ ಎದುರಿಸಿ ಈಜುವುದೇ ಇಲ್ಲಿನ ಹೆಚ್ಚುಗಾರಿಕೆ. ಬೀಚಿನಲ್ಲಿ ಹರಡಿದ್ದ ಬೆಣಚುಕಲ್ಲುಗಳ ಮೇಲೆ ಗಾಲಿಕುರ್ಚಿಯನ್ನು ತಳ್ಳಲು ಜಾನಕಿಯ ತಾಯಿತಂದೆಯರಿಗೆ ಪರರ ಅಗತ್ಯವಿದ್ದೇ ಇತ್ತು. ದೊರಕುತ್ತಿತ್ತು ಸಹ. ಈಕೆ ಅಲ್ಲಿ ಈಜು ಸ್ಪರ್ಧೆಗೆ ಬಂದಿದ್ದನ್ನು ತಿಳಿದು ಬೆರಗು ಕುತೂಹಲಗಳ ಗುಂಗಿನಲ್ಲಿದ್ದವರು ಇತರರ ಸಹಾಯದಿಂದ ನೀರಿಗಿಳಿದ ನಂತರ ಜಾನಕಿಯವರು ನೀರಿನೊಂದಿಗೆ ಸ್ಪರ್ಧಿಸಿದ ರೀತಿಗೆ ಮೆಚ್ಚಿ ತಲೆದೂಗಿದ್ದರು.

ನೀರಿಗಿಳಿಯುವವರೆಗೂ ಪರಾವಲಂಬಿಯಾದರೂ ಒಮ್ಮೆ ನೀರಿಗಿಳಿದಾಕ್ಷಣ ಸರ್ವಸ್ವತಂತ್ರರಾಗುತ್ತಿದ್ದ ಜಾನಕಿಯವರ ಧೈರ್ಯ, ಸಾಹಸ, ಸಾಧನೆಗಳಿಗೆ ಮೆಚ್ಚಿ ಕಡಲ್ಗಾಲುವೆ ಸಮಿತಿ ಇವರ ಈಜು ತಂಡಕ್ಕೆ ಜಾನಕಿ ಮಿಲನ್ ಟೈಂ ಎಕ್ಸ್‌ಪ್ರೆಸ್" ಎಂಬ ಹೆಸರಿಟ್ಟಿತು.

ಇವರ ತಂಡದಲ್ಲಿ ಒಟ್ಟು 6 ಮಂದಿ ಇದ್ದರು, 3 ಜನ ಪುರುಷರು 3ಮಂದಿ ಸ್ತ್ರೀಯರು. ಅಮೇರಿಕಾ ಹಾಗೂ ಬ್ರಿಟನ್‌ನಿಂದ ಇಬ್ಬಿಬ್ಬರು ಸ್ಪರ್ಧಿಗಳು, ಆಸ್ಟ್ರೇಲಿಯಾದಿಂದ ಒಬ್ಬರು ಬಂದಿದ್ದರು. ಜಾನಕಿಯೊಬ್ಬರನ್ನು ಬಿಟ್ಟು ಉಳಿದವರೆಲ್ಲ ದೃಢಕಾಯರೇ. ಅಲ್ಲಿ ಫ್ರೆಡಾಸ್ಟ್ರೀಟರ್ ಅವರ ಮಾರ್ಗದರ್ಶನದಲ್ಲಿ 25 ದಿನಗಳ ತರಬೇತಿ. ಪ್ರತಿ ದಿನ ಸತತಾಭ್ಯಾಸ. ಗಂಟೆಗಳ ಕಾಲ ನೀರಿನಲ್ಲಿ. 10 ಗಂಟೆಗಳ ಸತತ ಈಜು ಪ್ರತಿ ಈಜುಪಟುವಿನಿಂದ ಸ್ಪರ್ಧೆ ಏರ್ಪಡಿಸಿರುವ ಸಮಿತಿ ನಿರೀಕ್ಷಿಸುತ್ತದೆ, ಇದರಲ್ಲಿ ಕೆಲ ನಿಮಿಷಗಳ ವ್ಯತ್ಯಯವನ್ನೂ ಒಪ್ಪಿಕೊಳ್ಳುವುದಿಲ್ಲ.

ಜುಲೈ 28 ಜಾನಕಿಯ ಕನಸನ್ನು ನನಸಾಗಿಸಿದ ಸುವರ್ಣ ದಿನ. ಈಕೆಯ ಮುಂದಾಳ್ತನದಲ್ಲಿ ಈಕೆಯ ತಂಡ ಕಡಲ್ಗಾಲುವೆಯನ್ನು ದಾಟಿತು. 36ಕಿ.ಮಿ. ಉದ್ದದ ಕಾಲುವೆಯನ್ನು 14 ಗಂಟೆ 45 ನಿಮಿಷಗಳಲ್ಲಿ ಈಜಿದರು. ಕಡಲ್ಗಾಲುವೆ ಈಜಿದ ಪ್ರಥಮ ಅಂಗವಿಕಲ ಮಹಿಳೆ ಎಂಬ ಕೀರ್ತಿಗೆ ಪಾತ್ರರಾದರು. ಜುಲೈ 1ರಂದು ಹೆತ್ತವರೊಡನೆ ಭಾರತ ಬಿಟ್ಟು ಲಂಡನ್ನಿನ ಡೋವರ್‌ನಲ್ಲಿಳಿದಾಗಿನಿಂದ ಈಕೆಯ ಬಗ್ಗೆ ವಿಶೇಷ ಆಸಕ್ತಿ, ಕುತೂಹಲಗಳನ್ನು ಹೊಂದಿದ್ದ ಅಲ್ಲಿನ ಮಾಧ್ಯಮಗಳು ಜನರ ಗಮನ ಇವರೆಡೆಗೆ ಹರಿಯುವಂತೆ ಮಾಡಿದ್ದವು. ಉತ್ತಮ ಪ್ರೋತ್ಸಾಹ, ಉತ್ತೇಜನಗಳೂ ದೊರಕಿದ್ದವು. ಸ್ಪರ್ಧೆಯನ್ನು ಗೆದ್ದ ಜಾನಕಿಯನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದವು. ನಮ್ಮ ಮಾಧ್ಯಮಗಳು ಮಾಮೂಲಿನಂತೆ ಇತರ ಸುದ್ದಿಯ ನಡುವೆ ಪ್ರಕಟಿಸಿ ಕೈತೊಳೆದುಕೊಂಡಿದ್ದವು. ತೀರ ಇತ್ತೀಚೆಗೆ ಜಾನಕಿಯವರ ಯಶಸ್ಸನ್ನು ಗುರುತಿಸಿದವು.

ಪ್ರತಿ ಸಾಹಸಿ ಈಜುಪಟುವಿನ ಗುರಿ ಇಂಗ್ಲಿಷ್ ಕಡಲ್ಗಾಲುವೆ ದಾಟುವುದು. ಈ ಕನಸಿಗೆ ಜಾನಕಿಯೂ ಹೊರತಾಗಲಿಲ್ಲ. ಅನಿತಾ ಸೂದ್‌ರ ಪ್ರೋತ್ಸಾಹ, ಉತ್ತೇಜನದಿಂದ ಪಲ್ಲವಿಸಿ, ಬೆಂಗಳೂರು, ಮಲ್ಪೆಗಳ ಅನುಭವದಿಂದ ಹುಲುಸಾಗಿ ಬೆಳೆದ ಸಾಧನೆಯ ಕನಸಿನ ಬಳ್ಳಿ ಡೋವರ್‌ನಲ್ಲಿ ಹೂವಾಗಿ ಅರಳಿ ಎಲ್ಲರ ಮನಕ್ಕೆ ಮುದ ನೀಡಿತು. ಈಗ ಈಕೆಯ ಮುಂದಿನ ಗುರಿ 'ಒಲಿಂಪಿಕ್ಸ್'. ಮೊಗ್ಗಾಗಿರುವ ಈ ಆಸೆಯೂ ಹೂವಾಗಿ ಅರಳಿ ಕನ್ನಡ ದೇವಿಯ ಈ ಹೆಮ್ಮೆಯ ಪುತ್ರಿಯ ಸಾಧನೆಗೆ ಮತ್ತೊಂದು' ಗರಿ ಸಿಗಲೆಂದು ಹಾರೈಸೋಣ ಅಲ್ಲವೆ ? ಗಿನ್ನಿಸ್ ದಾಖಲೆಗೆ ಜಾನಕಿಯವರ ಸಾಧನೆ ಸೇರುವ ಸಂಭವವಿದೆ, ಕೇವಲ ನಾಲ್ಕೈದು ವರ್ಷಗಳ ಅಲ್ಪ ಅವಧಿಯಲ್ಲೇ ಇಷ್ಟು ದೊಡ್ಡ ಸಾಧನೆಗೆ ತಕ್ಕ ಪರಿಶ್ರಮ, ಸತತ ಕಠಿಣ ಅಭ್ಯಾಸಕ್ಕೆ ಸಿದ್ಧರಾದ ಜಾನಕಿಯವರ ದೃಢ ಮನಸ್ಸು, ಛಲ, ಸಂಕಲ್ಪಶಕ್ತಿಗಳ ಬಗ್ಗೆ ಅಭಿಮಾನ ಮೂಡುತ್ತದೆ.

'ಮೀಸಲಾತಿ'ಯ ಮತ್ತಿನಲ್ಲಿ ಮುಳುಗಿರುವ ನಮಗೆ ಜಾನಕಿಯವರ ಸಾಧನೆ, ಆತ್ಮವಿಶ್ವಾಸ, ಸಂಕಲ್ಪಶಕ್ತಿ ಹೊಸಪಾಠ ಕಲಿಸುತ್ತಿದೆ. ಎಲ್ಲದರಲ್ಲೂ ಮೀಸಲಾತಿಯನ್ನು ಬಯಸುವ ನಾವೇ ವಿಕಲ ಮನದವರು, ಆಕೆಯಂಥ ಸಾಧಕರು ಪರಿಪೂರ್ಣರು ಎಂದೆನಿಸುತ್ತದೆ.

---

ಹೆಣ್ಣು ಗಂಡಿನ ನಡುವಣ ಸಂಬಂಧ ತುಂಬ ಖಾಸಗಿಯಾದದ್ದು. ಆಯ್ಕೆಯ ನಿರ್ಧಾರವನ್ನು ವ್ಯಕ್ತಿಗಳಿಗೇ ಬಿಟ್ಟುಬಿಡಬೇಕು. ಸಮಾಜ ಜನರ ಖಾಸಗೀ ಜೀವನದಲ್ಲಿ ಹಸ್ತಕ್ಷೇಪ ನಡೆಸುತ್ತದೆ. ಮದುವೆಗೆ ಮುನ್ನ ಗಂಡು ಹೆಣ್ಣು ಸಹಬಾಳ್ವೆ ನಡೆಸಲು ಇಚ್ಛಿಸಿದಲ್ಲಿ ಹಾಗೇ ಇರಲಿ ಬಿಡಿ. ಆದರೆ ಅಂಥವರು ಮಕ್ಕಳನ್ನು ಪಡೆಯಬಾರದು. ಇಂಥ ಮಕ್ಕಳಿಗೆ ಯಾವ ಹೆಸರು, ಸ್ಥಾನಮಾನ ಸಿಕ್ಕೀತು ? ಸಮಾಜದ ಆಕ್ರೋಶ ಅವಹೇಳನಗಳಿಂದ ಅವರ ಬದುಕಿನ ಮೇಲೆ ನೇತ್ಯಾತ್ಮಕ ಪರಿಣಾಮ ಉಂಟಾಗುತ್ತದೆ.

**ಚಿತ್ರನಟಿ ಸಾಹುಕಾರ್ ಜಾನಕಿ**

# ಕಾಲಚಕ್ರ

○ ಶೀಲಾಪಾಲ್

ಅಂದು ತನಗೆ ಮದುವೆಯಾದಾಗ ಕೇವಲ ಹತ್ತು ವರ್ಷ. ಹುಡುಗನ ಬಗ್ಗೆ ನೂರೆಂಟು ಕಥೆಗಳಿದ್ದು ಮನೆಯವರೆಲ್ಲ ವಿರೋಧಿಸಿದರೂ ತಂದೆಗೆ ಮಾತ್ರ ಮದುವೆಯ ನಂತರ ಹುಡುಗ ಸರಿ ಹೋಗುವನೆಂಬ ಪೂರ್ಣ ವಿಶ್ವಾಸ. ನನ್ನ 12ನೇ ವಯಸ್ಸಿಗೆ ಅತ್ತೆಯ ಮನೆಗೆ ಬಂದೆ. ಒಂದು ತಿಂಗಳಷ್ಟೇ ಅತ್ತೆಯ ಮನೆಯಲ್ಲಿರುವ ಸೌಭಾಗ್ಯ. ಆನಂತರ ಕೈಹಿಡಿದವರು ಎಲ್ಲರನ್ನೂ ವಿರೋಧಿಸಿ, ತಮ್ಮ ಪ್ರೇಯಸಿಯ ಮನೆಯಲ್ಲೇ ಒಂದು ಭಾಗದಲ್ಲಿ ಪ್ರತ್ಯೇಕ ಸಂಸಾರ ಹೂಡಲು ಕರೆದೊಯ್ದರು. ದಿನನಿತ್ಯ ಕಣ್ಣ ಮುಂದೆಯೇ ಇವರ ಸಲ್ಲಾಪ. ಸಾಲದ್ದಕ್ಕೆ ಚಿಕ್ಕ ವಯಸ್ಸು ಹಾಗೂ ಭಯದಿಂದಾಗಿ ನನ್ನಿಂದಾದ ತಪ್ಪುಗಳು ಬಟ್ಟ ಬಯಲಾಗಿ ಎಲ್ಲರ ಮುಂದೆಯೇ ಗಂಡನಿಂದ ಬಯ್ಗುಳ ಹಾಗೂ ಹೊಡೆತಗಳ ಸನ್ಮಾನ. ಇಷ್ಟರ ನಡುವೆಯೂ ನಾನು ಕ್ರಮವಾಗಿ 1 1/2 ವರ್ಷ 2 ವರ್ಷಗಳ ಅಂತರದಂತೆ 10 ಮಕ್ಕಳ ಮಹಾಮಾತೆಯ ಪಟ್ಟಕ್ಕೇರಿದೆ. ಕೇವಲ 2ನೇ ತರಗತಿಯಷ್ಟೇ ಓದಿದ ನನಗೆ ಅಜ್ಞಾನ, ಅಸಹಾಯಕತೆಗಳಿಂದ ಗಂಡನಿಲ್ಲದೆ ಬದುಕಲಾರೆನೆಂಬ ಪರಾವಲಂಬಿ ಮನೋಭಾವ. ಆದರೆ ಆತನಿಗಾದರೋ ನಾನು ಹೋದರೆ ನೀನು ಬೀದಿಯಲ್ಲಿ ವಡೆ ಮಾರಿಕೊಂಡು ಬದುಕಬೇಕು, ನಾನಿಲ್ಲದೆ ನಿನ್ನ ಬದುಕೇ ಶೂನ್ಯ–ಎನ್ನುವ ಅಹಂಕಾರ. ಆದ್ದರಿಂದ ಕಾಲಕ್ರಮೇಣ ಈತನು ಹೋದರೂ ನಾನು ಎಂದಿನಂತೆಯೇ ಬದುಕಬೇಕೆಂಬ ಛಲ ನನ್ನಲ್ಲಿ ಮನೆ ಮಾಡಿತು.

ಕುಡಿತ ಹಾಗೂ ವಿಲಾಸಗಳಿಗೆ ಶರಣಾದ ನನ್ನ ಗಂಡ 50 ವರ್ಷಕ್ಕೇ ಸಾವನ್ನಪ್ಪಿದನು. ಬದುಕಿದ್ದಾಗಲೂ ಕಂಟಕಪ್ರಾಯನಾಗಿದ್ದ ಈತನ ಸಾವಿಗಾಗಿ ನನ್ನ ಕಣ್ಣಿನಿಂದ ಒಂದು ತೊಟ್ಟು ನೀರೂ ಹನಿಯಲಿಲ್ಲ. ಬದುಕಿದ್ದಾಗಲೇ ನನ್ನ ಪಾಲಿಗೆ ಸತ್ತಂತಿದ್ದ ಈತನಿಗಾಗಿ ನಾನೇಕೆ ನನ್ನ ಕುಂಕುಮ ಬಳೆಗಳನ್ನು ತೆಗೆಯಬೇಕೆಂಬ ಛಲ. ಅದಕ್ಕಾಗಿ ನಾನು ವಾದಿಸಿ ಅತ್ತದ್ದೆಷ್ಟು ? ಎಲ್ಲರೂ ನನ್ನ ವಿರೋಧಿಗಳೇ. ಮುಂದೆ ನಿಮ್ಮ ಮಕ್ಕಳ ಭವಿಷ್ಯಕ್ಕಾಗಿಯಾದರೂ ನೀವು ಸಂಪ್ರದಾಯವನ್ನು ಪಾಲಿಸಬೇಕು–ಎಂಬುದು ಅವರ ವಾದ. ಎಲ್ಲರೂ ಇಷ್ಟು ಹೇಳಿದರೂ ನಿನಗೇಕಮ್ಮ ಈ ಕೆಟ್ಟ ಹಠ ? ಎಂಬುದು ಮಕ್ಕಳ ವಾದ, ನನ್ನ ಅಂತರಂಗದ ತುಮುಲ ಇವರಿಗೆಲ್ಲ ಹೇಗೆ ತಾನೇ ಅರಿವಾದೀತು ? ಬದುಕಿದ್ದಾಗಲೇ ನನ್ನ ಪಾಲಿಗೆ ಇಲ್ಲವಾಗಿದ್ದ ಗಂಡನು ಸತ್ತ ಮೇಲೂ ತನ್ನ ಛಲವನ್ನು ಸಾಧಿಸಿಕೊಂಡನು.

ಮೂವತ್ತು ವರ್ಷಗಳ ನಂತರ ಇದೇ ಕಥೆಯ ಪುನರಾವರ್ತನೆ. ವ್ಯತ್ಯಾಸವಿಷ್ಟೇ, ಗಂಡನನ್ನು ಕಳೆದುಕೊಂಡ ನನ್ನ ಮಗಳಿಗೆ ಮಂಗಳದ್ರವ್ಯಗಳನ್ನು ತೆಗೆಯಕೂಡದೆಂದು ಸಮಾಜ ಸುಧಾರಕಿಯರ ಒತ್ತಾಯ. ಹೆಂಡತಿಯ ಸಾವಿನ ನಂತರ ಗಂಡನಿಗಿಲ್ಲದ ನಿಯಮ ಹೆಂಡತಿಗೆ ಮಾತ್ರ ಏಕೆ ಬೇಕು ?–ಇದು ಇವರ ವಾದ. ನಾನು ಪ್ರಯತ್ನಪೂರ್ವಕವಾಗಿ ಸಾಧಿಸಲಾಗದ್ದು ಅಪ್ರಯತ್ನವಾಗಿಯೇ ನನ್ನ ಮಗಳಿಗೆ ಸಾಧಿಸಿದೆ. ಕಾಲಗತಿಯಲ್ಲಿ ನಮ್ಮ ಮಹಿಳೆಯರು ಇಷ್ಟರಮಟ್ಟಿನ ಪ್ರಗತಿಯನ್ನು ಸಾಧಿಸಿದ್ದಾರಲ್ಲಾ ! ಎಂದು ಸಮಾಧಾನಪಟ್ಟುಕೊಂಡೆ.

---

ಬಂಗಾಲಿ ಸಿನಿಮಾ ನಟಿ ಅಪರ್ಣಾ ಸೇನ್, 11ನೇ ತಾಷ್ಕೆಂಟ್ ಅಂತರರಾಷ್ಟ್ರೀಯ ಫಿಲ್ಮೋತ್ಸವದ ಶ್ರೇಷ್ಠ ನಟಿ ಪ್ರಶಸ್ತಿ ಪಡೆದಿದ್ದಾರೆ. ಮೃಣಾಲ್ ಸೇನ್ ನಿರ್ದೇಶನದ 'ಮಹಾ ಪೃಥಿವಿ' ಚಿತ್ರದಲ್ಲಿನ ಅಭಿನಯಕ್ಕಾಗಿ ಅವರಿಗೆ ಈ ಪ್ರಶಸ್ತಿ ಲಭಿಸಿದೆ.

---

ಲೇ : ಕೆ. ಪಿ. ಪೂರ್ಣಚಂದ್ರ ತೇಜಸ್ವಿ

## ಸ್ತ್ರೀ ಸಂಚಯ

ಪ್ರಕಾಶಕರು : ಪುಸ್ತಕ ಪ್ರಕಾಶನ
91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು-570 009

ದಾನಮ್ಮ ಶಂಕ್ರಪ್ಪನ ಕಡೆ ತಿರುಗಿದಳು. ಅವಳ ಕಣ್ಣಲ್ಲಿ ಉರಿಯುವ ತಿರಸ್ಕಾರ ಇತ್ತು.

"ನಿನ್ನಂಗಡೀಲಿ ಸೇಂದಿ ಕುಡಿದು ಕುಡಿದು ಓತಿಕ್ಯಾತನಂಗೆ ಆಗಿದಾವೆ. ಹಿಚ್ಚಿದರೆ ಮುಕ್ಳೀಲಿ ಮೂರು ತೊಲ ಮಾಂಸ ಇಲ್ಲ. ಕುಡಿದು ರಾತ್ರೆಲ್ಲಾ ರಸ್ತೇಲೋ ಚರಂಡಿಲೋ ಬಿದ್ದು ಬಂದ್ರೆ ಮಕ್ಕಳು ಹೆಂಗೋ ಆಗ್ತವೆ ? ಮಕ್ಕಳಾಗಲಿಲ್ಲಂತೆ ! ಅಮಾಸೆಗೊಂದು ಸಾರಿ ಹುಣ್ಣಿಮೆಗೆ ಒಂದು ಸಾರಿ ಹೆಡ್ತಿ ನೆನಪಾದ್ರೆ ಮಕ್ಕಳಾಗ್ತವಾ ? ಥು ಬೇವರಸಿ. ನೀನು ನಿಜವಾಗ್ಲು ನಿಮ್ಮಪ್ಪಂಗೆ ಹುಟ್ಟಿದ್ರೆ ಹೋಗಿ ಕೇಳ್ಕೊಂಡು ಬಾ ಹ್ಯಾಗೆ ಹುಟ್ಟಿಸ್ದೆ ಅಂತ" ಎಂದಳು ದಾನಮ್ಮ.

ಅಲ್ಲಿದ್ದ ಹೆಣ್ಣು ಮಕ್ಕಳಿಗೆಲ್ಲಾ ನಿಧಾನವಾಗಿ ಅರಿವು ಮೂಡತೊಡಗಿತು. ದಾನಮ್ಮನ ಕೋಪ ಕೇವಲ ಸಿಟ್ಟಿನ ಸನ್ನಿ ಅಲ್ಲ. ಅದಕ್ಕೂ ಒಂದು ತರ್ಕ, ತಿಳುವಳಿಕೆ, ಯೋಚನೆಯ ಹಿನ್ನಲೆ ಇದೆ ಎಂದು. ಗಂಡಸರೆಲ್ಲಾ ಹೇಗೆ ನಿಷ್ಕಾರಣವಾಗಿ ತಮ್ಮನ್ನು ಅಪರಾಧಿಗಳಾಗಿ ಪರಿವರ್ತಿಸುತ್ತಿದ್ದಾರೆ ಎನ್ನಿಸಿತು.

ನಾಗಮ್ಮನಿಗೆ ದೆವ್ವ ಬಿಡಿಸುತ್ತೇನೆಂದು ಮುಗ್ಗಲು ಮುರಿಯುವಂತೆ ಹೊಡೆಯುವುದನ್ನು ನೋಡಬೇಕಲ್ಲಪ್ಪಾ ಎಂದು ಕಳವಳದಲ್ಲಿದ್ದ ಹೆಂಗಸರಿಗೆಲ್ಲಾ ದಾನಮ್ಮ ದೇವರೇ ಕಳಿಸಿದ ದುರ್ಗಿಯಂತೆ ಕಂಡಳು. ಅವರು ನೆರದಿದ್ದ ಗಂಡಸರ ಕಡೆಗೆಲ್ಲಾ ಒಮ್ಮೆ ನೋಡಿದರು. ಸೊಂಟ ಉಳುಕಿಸಿಕೊಂಡು ನಿಟ್ಟುಸಿರು ಬಿಡುತ್ತಿರುವವರು, ಹೆಂಡಕುಡಿದು ಮೈಯೆಲ್ಲಾ ಲಡ್ಡಾದವರು, ಜಾತಿ ಜಗಳ ತಕ್ಕೊಂಡು ಯವ್ವನ ಖರ್ಚು ಮಾಡುತ್ತಿರುವವರು ! ಹೇಸಿಗೆ ಸೂಳೇ ಮಕ್ಕಳು ! ಯಾವನಾಯ್ತೋ ಅವನ ಜೊತೆಗೆ ಎತ್ತಕಡೆಗಾಯ್ತೋ ಅತ್ತ ಕಡೆಗೆ ಓಡೇ ಹೋಗಬೇಕೆಂದು ಅವರಿಗ ಅನ್ನಿಸಿತು.

ಆ ರೇಜಿಗೆಯಲ್ಲಿ ನಾಗಮ್ಮ ಪಂಡಿತನ ಜೊತೆ ಓಡಿ ಹೋದದ್ದು ಅಪರಾಧವೇ ಅಲ್ಲ, ಒಂದು ಸಾಹಸ ಎಂದೆನ್ನಿಸಿತು.

"ಒಳ್ಳೇ ಮಾತ್ನಲ್ಲಿ ಕರಿಯನ ಹತ್ರ ಉಳುಕು ತೆಗೆಸಿಕೊಂತಿರೋ ಇಲ್ಲಾ ನಿಮ್ಮ ಹೆಂಡ್ರು ಸಂತೇಲಿ ಸೀರೆ ಬಿಚ್ಚಿ ಹೋಗಿ ಬರೋರಿಗೆ ಬಸುರಾಗಬೇಕೋ ಏಚ್ನೆ ಮಾಡಿ" ಎಂದು ಕಠೋರ ನಿರ್ಧಾರದ ಧ್ವನಿಯಲ್ಲಿ ಹೇಳಿ "ಮಕ್ಕಳಾಗಬೇಕೂಂತ ನಿಮ್ಮಂಗೆ ನಮಗೂ ಇರ್ತದೆ" ಎಂದಳು ದಾನಮ್ಮ,

ದಾನಮ್ಮನ ಅಂತರ್ವಾಣಿಯನ್ನು ಕೇಳಿ ಅಲ್ಲಿದ್ದವರೆಲ್ಲಾ ಅದುರಿ ಹೋದರು, ಕಿರುಗೂರಿನ ಗಯ್ಯಾಳಿಯರೆಲ್ಲಾ ದಾನಮ್ಮನ ರೌರವ ರೋಷದ ಮಾತುಗಳಿಗೆ ತಲೆಯಾಡಿಸುತ್ತಿರುವುದನ್ನು ನೋಡಿ ಹೆಗ್ಡೆ ಕಂಗಾಲಾದ. ಸ್ವಲ್ಪ ಬಾಯಿ ಮಾಡುವ ಬಜಾರಿಯರು ಎಂದು ತಿಳಿದಿದ್ದನೇ ಹೊರತು ಇಷ್ಟು ನಿಶ್ಚೈಸಿದವರೆಂದು ತಿಳಿದಿರಲಿಲ್ಲ. ಇನ್ನು ಇವಳಿಗೆ ಬಯ್ಗುಳ ಮುಂದುವರಿಸಲು ಅವಕಾಶ ಕೊಟ್ಟರೆ ಅಕ್ಷರಶಃ ನಾಲಿಗೆಯಲ್ಲಿ ನಮ್ಮನ್ನು ಹರಿದೇ ಹಾಕುತ್ತಾಳೆಂದು ಯೋಚಿಸಿದ.

ಶಂಕ್ರಪ್ಪನ ಮುಲಾಜಿಗೆ ಸಿಕ್ಕಿ ಪಂಚಾಯ್ತಿಗೆ ಬಂದಿದ್ದ ಒಂದಷ್ಟು ಜನ "ಇದಕ್ಕೆಲ್ಲಾ ಪಂಚಾಯ್ತಿ ಯಾಕೆ ಅಂತ ಹೇಳಿದರೆ ನಮ್ಮ ಮಾತು ಕೇಳ್ತಾರಾ ?" ಎಂದು ಹಿಂದಿನ ಸಾಲಿನಿಂದ ಗೊಣಗುಟ್ಟಿದರು.

"ಇದೇನು–ಹೆಣ್ಣಂಗ್ಸು ಆಡೋ ಮಾತಾ ? ಏಯ್ ! ಇಲ್ಲಿ ಕೂತಿರೋರಿಗೆ ಮರ್ಯಾದೆ ಕೊಟ್ಟು ಮಾತಾಡು" ಎಂದು ಹೆಗ್ಡೆ ಕೂಗಿದ. ಈಗಲಾದರೂ ಇಲ್ಲಿ ಕುಳಿತಿರುವ ಗಂಡಸರಿಗೆ ಗಂಡಸ್ತನ ಕೆರಳಿ ಈ ಗಯ್ಯಾಳಿಯರಿಗೆ ಸೆದೆ

ಬಡಿಯಬಹುದು ಎಂದು ಆಲೋಚಿಸಿ ಹೊಡೆಯುವವನಂತೆ ಕೈಯಲ್ಲಿದ್ದ ಬೆತ್ತವನ್ನು ದಾನವ್ವನತ್ತ ಎತ್ತಿದ.

ಈ ನಡುವೆ ಕರಿಯನ ಹೆಂಡತಿ ಕಾಳಿ "ಉಳುಕು ತೆಗೆಯೋಕೆ ಕೆಲಸ ಬಿಟ್ಟು ಒಪ್ಪತ್ತು ನಡಕೊಂಡು ಹೋಗಿ ಬರ್ತೀಯ. ಇಲ್ಲಿ ಮನೆ ಪಕ್ಕ ಮೂರು ಜನ ಸೊಂಟ ಹಿಡ್ಕೊಂಡು ನರಳಾಡ್ತ ಇದ್ರೆ ನಿನ್ನ ಕಣ್ಣಿಗೆ ಕಾಣಾಕಿಲ್ವ ? ಇಷ್ಟೆಲ್ಲಾ ಆಗಿದ್ದು ನಿನ್ನಿಂದೇಯ. ಒಳ್ಳೆ ಮಾತ್ನಾಗೆ ಅವರಿಗೆ ಉಳುಕು ತೆಗೀತಿಯಾ ಇಲ್ಲಾ...?" ಎಂದು ಕರಿಯನ ಮೇಲೆ ರೌದ್ರಾವತಾರ ತಾಳಿ ಎಗರಿ ಬಿದ್ದಳು.

"ಹಂಗಲ್ಲಾ ಮಾರಾಯ್ತಿ. ನಾನು ಕಾಲಾಗೆ ತುಳಿದು..." ಎಂದೇನನ್ನೋ ಕರಿಯ ಹೇಳ ಹೊರಟಿದ್ದ. ಆದರೆ ಕಾಳಿಗೆ ಎಷ್ಟು ರೇಗಿತ್ತೆಂದರೆ ಕರಿಯನ ಮಾತು ಮುಂದುವರಿಯಲು ಬಿಡದೆ "ಅವೆಲ್ಲಾ ಮಾತು ಬ್ಯಾಡ, ಅವತ್ತು ದಿಮ್ಮಿ ಉರುಳಿ ಬರ್ತ ತಾಳಿ ಆಣೆ ಹಾಕಿ ತಡದ್ಲು ದಾನವ್ವ. ಇಲ್ದಿದ್ರೆ ಇವತ್ತು ನಿಮ್ಮವ್ವಂಗೆ ಹಾಲುತುಪ್ಪ ಬಿಡಬೇಕಿತ್ತು." ಎಂದು ಅಬ್ಬರಿಸಿದ ಅವಳನ್ನು ಸಮಾಧಾನ ಮಾಡಲು ಹತ್ತಿರ ಬರುತ್ತಿದ್ದ ಕರಿಯನಿಗೆ ಎಲ್ಲರೆದುರು ಹೊಡೆದು ತಳ್ಳೀಬಿಟ್ಟಳು. ಮಿಕ್ಕ ಹೆಂಗಸರೆಲ್ಲಾ ಅವಳನ್ನು ಗಟ್ಟಿ ಹಿಡಿದುಕೊಳ್ಳದಿದ್ದರೆ ಕಾಳಿ ಸರಿಯಾಗಿ ಮಾರಾಮಾರಿ ಮಾಡಲು ತೀರ್ಮಾನಿಸಿದ್ದಳು.

ಮೈಮೇಲೆ ಯಾವ ದೇವರನ್ನೂ ಅವಾಹನೆ ಮಾಡಿಕೊಳ್ಳಲು ಅಸಮರ್ಥನಾದ ಹೆಗ್ಡೆ ಈಗ ದಾನವ್ವನಿಗೆ ಕೈ ಎತ್ತಿರುವುದು ಕೇವಲ ದ್ವೇಷದಿಂದಲೇ, ಮಿಕ್ಕ ಗಂಡಸರು ಅದನ್ನು ನೋಡಿಯೂ ಅವನು ತಮ್ಮ ಪ್ರತಿನಿಧಿ ಎಂಬಂತೆ ಭಾವಿಸಿ ಸುಮ್ಮನೆ ಕುಳಿತಿರುವುದನ್ನು ನೋಡಿದ ಹೆಂಗಸರೆಲ್ಲರಿಗೂ ಈ ಗಂಡಸರನ್ನು ನೆಚ್ಚಿ ಸುಖವಿಲ್ಲ, ತಮ್ಮ ಪರವಾಗಿ ತಾವೇ ಹೋರಾಡಬೇಕೆಂದು ಸರ್ವಸ್ಪಷ್ಟವಾಗಿ ಅರಿವಾಯ್ತು. ಕಾಳಿಯ ವರ್ತನೆ ಅದಕ್ಕೆ ಮುನ್ನುಡಿಯಂತಿತ್ತು.

---

ಈ ಸಲದ ನೊಬೆಲ್ ಶಾಂತಿಪುರಸ್ಕಾರವನ್ನು ಬರಹಗಾರ್ತಿ ರಿಗೊಬೆರ್ತಾಮೆಂಚು ಪಡೆದಿದ್ದಾರೆ. ಗ್ವಾಟೆಮಲಾದ ಭಾರತೀಯರ ಹಾಗು ಮಾನವ ಹಕ್ಕುಗಳ ಹೋರಾಟಕ್ಕಾಗಿ ಅವರಿಗೆ ಈ ಪುರಸ್ಕಾರ ಲಭಿಸಿದೆ.

* • *

ಜರ್ಮನಿಯ ಗ್ರೀನ್ ಪಾರ್ಟಿ ಸ್ಥಾಪಕರಾದ ಪೆಟ್ರಾಕೆಲ್ಲಿ ಹಾಗು ಗೆರ್ಟ್ ಬಾಸ್ಟಿಯನ್ ದಂಪತಿಗಳು ಆತ್ಮಹತ್ಯೆ ಮಾಡಿಕೊಂಡಿರುವುದಾಗಿ ತಿಳಿದುಬಂದಿದೆ. ಗುಂಡಿಟ್ಟುಕೊಂಡು ಆತ್ಮಹತ್ಯೆಮಾಡಿಕ್ಕೊಂಡಿದ್ದಾರೆಂದು ಶವದ ಬಳಿ ದೊರೆತ ಪಿಸ್ತೂಲಿನಿಂದ ತಿಳಿದಿದೆ. ಶಾಂತಿ, ನ್ಯಾಯ ಹಾಗು ಪರಿಸರ ರಕ್ಷಣೆಯೇ ಮೂಲ ಉದ್ದೇಶವಾಗಿದ್ದ ಗ್ರೀನ್ ಪಾರ್ಟಿ' ಈ ದಂಪತಿಗಳ ಚಿಂತನೆಯ ಕೂಸು. ರಾಜಕೀಯ ಮೂಲಗಳ ಇತ್ತೀಚಿನ ದಿನಗಳಲ್ಲಿ ಇವರಿಬ್ಬರೂ ರಾಜಕೀಯದಿಂದ ಹಿಂದೆ ಸರಿದಿದ್ದು ಹಾಗು ಅವರಿಗೆ ಗ್ರೀನ್ ಪಾರ್ಟಿಯಲ್ಲಿ ಯಾರು ಅನುಯಾಯಿಗಳಿರಲಿಲ್ಲವೆಂದು ತಿಳಿಸಿವೆ. ಶ್ರೀಮತಿ ಕೆಲ್ಲಿಯವರ ಸಿದ್ಧಾಂತಗಳನ್ನು ಅನುಸರಿಸದೆ ಅವರನ್ನು ಕಡೆಗಣಿಸಿದ್ದು ಅಚಾತುರ್ಯವಾಯಿತೆಂದು ಗ್ರೀನ್ ಪಾರ್ಟಿಯ ಕಾರ್ಯಕಾರಿ ಸಮಿತಿಯ ಸದಸ್ಯರು ತಿಳಿಸಿದ್ದಾರೆ. ಪಾರ್ಟಿಯ ಉದ್ದೇಶಗಳಿಗಾಗಿ ಈಕೆ ಎಲ್ಲವನ್ನು ತ್ಯಾಗ ಮಾಡಿದ್ದರು.

---

# ಐವರು ಸಹೋದರಿಯರು

ಅಮೃತ ಪ್ರೀತಂ

ಈ ಕಥೆಯೊಂದು ವಿಶಾಲ ದೇಶದ್ದು. ತಣ್ಣನೆಯ ಸ್ಫಟಿಕದಂತ ಸ್ವಚ್ಛ ನೀರು 'ಚೇತನ'ಳ ಸುಂದರ ಕಾಲು ಗಳನ್ನು ಕಸುವಿನಿಂದ ತೊಳೆಯಿತು. ಹೂಗಳು ಪರಿಮಳ ಪೂಸಿದವು. ಏಳು ಬಣ್ಣಗಳು ಚೆಂದದ ಉಡುಗೆ ಉಡಿಸಿದವು. ಸೂರ್ಯ ಕಿರಣಗಳು ಹಣ್ಣುಗಳಿಗೆ ರಸ ತುಂಬಿದವು. 'ಚೇತನ' ಕಣ್ಣಲ್ಲಿ ಉತ್ಸುಕತೆ ತುಂಬಿ ಗಾಳಿ ಯನ್ನು ಕೇಳಿದಳು. "ಈ ಶತಮಾನದ ಐವರು ಹೆಣ್ಣು ಮಕ್ಕಳ ಬಗ್ಗೆ ಕೇಳಿದ್ದೇನೆ. ಸುಂದರ ತರುಣಿಯರಂತೆ."

"ಹೌದು"

"ಇಂದು ನಾನವರನ್ನು ಕಾಣಬೇಕು."

ಗಾಳಿ ನಕ್ಕಿತು.

ನಾನೈದು ಉಡುಗೊರೆಗಳ ತಂದಿರುವೆ–ಎಲ್ಲವೂ ಅಮೂಲ್ಯವಾದವು. ಎಲ್ಲರಿಗೂ ಒಂದೊಂದು ನೀ ನನ್ನೊಡನೆ ಬರುವೆಯಾ ?

"ನಿನಗಿಷ್ಟವಾದರೆ"

"ಮೊದಲು ಹಿರಿಯವಳನ್ನು ನೋಡಬೇಕು"

"ಸರಿ ಸರಿ ಆದರೆ ಗಮನದಲ್ಲಿಟ್ಟುಕೋ, ಅವಳ ಮನೆಗೆ ಕಿಟಕಿಗಳಿಲ್ಲ. ಒಂದೇ ಒಂದು ಬಾಗಿಲುಂಟು ಹೋಗುವಾಗ ಅವಳ ಗಂಡ ಹೊರಗಿನಿಂದ ಬೀಗ ಹಾಕುತ್ತಾನೆ. ಹಿಂದಿರುಗಿದ ಮೇಲೆ ಒಳಗಿನಿಂದ ಹಾಕು ತ್ತಾನೆ."

"ಸುಗಂಧದಂತೆ ನಿನ್ನೊಳಗೆ ನನ್ನನ್ನು ಸೇರಿಸಿಕೊ. ಆಗ ನಾನವಳ ಮನೆಗೆ ಹೋಗಬಹುದು."

"ಉಹು ಸಾಧ್ಯವಿಲ್ಲ. ಸುಗಂಧ ನನಗೆ ಭಾರವಾಗಿ ಸಂದಿನಿಂದ ತೂರಿ ಹೋಗುವುದು ಕಷ್ಟ. ಗೋಡೆ ದಾಟುವ ವೇಳೆಯಲ್ಲಿ ಪಕ್ಕ ಮುರಿಯಬಹುದು"

ಗಾಳಿ ಐವರಲ್ಲಿ ಹಿರಿಯವಳ ಮನೆಗೆ ಚೇತನಳನ್ನು ಕರೆ ದೊಯ್ಯಿತು.

ಚೇತನ ನೋಡಿದಳು. ವಿಶಾಲ ಗೋಡೆಯ ಮೇಲೆ ಕೊರೆದ ಅಸಂಖ್ಯಾತ ಚಿತ್ರಗಳು... ನೂರು... ಸಾವಿರ... ಚಿತ್ರಗಳು.

"ಈ ಗೋಡೆ ಇಲ್ಲಿ ಅನೇಕ ಶತಮಾನಗಳಿಂದಿದೆ. ಒಮ್ಮೆಯೂ ಹೊಸಲು ದಾಟದೆ ಮನೆಯೊಳಗೇ ಇದ್ದು ಸತ್ತ ಹೆಣ್ಣಿನ ಚಿತ್ರವನ್ನು ಈ ಗೋಡೆಯ ಮೇಲೆ ಕೆತ್ತು ತ್ತಾರೆ ಈ ನೆಲದ ಜನ"

"ಒಮ್ಮೆಯೂ ಯಾರೂ ಈ ಹೊಸಲು ದಾಟಲಿಲ್ಲವೆ ?"

"ಇಲ್ಲ ಚೇತನ ಎಂದೂ ಇಲ್ಲ !"

"ಈ ಗೋಡೆಗಳ ಹೆಸರೇನು ?"

"ಸಂಪ್ರದಾಯ — ಕೆಲವು ವಂಶಪಾರಂಪರ್ಯವಾಗಿ, ಕೆಲವು ಧರ್ಮದ ಮೂಲಕ ಇನ್ನೂ ಕೆಲವು ಸಮಾಜದಿಂದ ನಿರ್ಮಿಸಲ್ಪಟ್ಟವು"

"ಆದರೆ ಒಂದೇ ಒಂದು ಸಲ ಈ ಮನೆಯ ಹೆಂಗಸನ್ನು ನೋಡಬೇಕು."

"ಸೂರ್ಯ ರಶ್ಮಿಯೂ ಅವಳನ್ನು ಕಂಡಿಲ್ಲವೆಂದರೆ ನಿನಗೆ ಹೇಗೆ ಸಾಧ್ಯವಾದೀತು ?"

"ಅಲ್ಲ. ಗಾಳಿ ನಾವೀಗ 20ನೇ ಶತಮಾನದಲ್ಲಿದ್ದೇವೆ. ನೀನಾವ ಕಾಲದ ಮಾತನಾಡುತ್ತಿದ್ದೀಯಾ ?"

"ಇಲ್ಲಿ ಶತಮಾನಗಳು ಮನೆಯ ಸರಹದ್ದಿನಾಚೆ ಚೆಲ್ಲಾಟವಾಡುತ್ತವೆ. ಹತ್ತು ಶತಮಾನಗಳು ಸಾಗಿದರೂ ಒಳಗಿನವರಿಗೇನೂ ವ್ಯತ್ಯಾಸವಿಲ್ಲ"

"ನಾನವಳಿಗೆ ಉಡುಗೊರೆ ತಂದಿದ್ದೇನೆ."

ಒಂದು ವೇಳೆ ಹೇಗಾದರೂ ನಿನ್ನ ಉಡುಗೊರೆ ಅವಳಿಗೆ ತಲುಪಿದರೂ, ಅವಳ ಕೈ ಅದನ್ನು ಮುಟ್ಟಲಾರದು.

"ಯಾಕಾಗ ಬಾರದು ?"

"ಕಾರಣ ಈ ಜಗತ್ತಿನ ಎಲ್ಲವು ಅವಳಿಗೆ ತ್ಯಾಜ್ಯ

"ನನ್ನ ಮಾತುಗಳನ್ನು ಕೇಳಲಾರಳೆ ?"

"ಇಲ್ಲ, ಈ ಗೋಡೆಯಾಚಿನ ಎಲ್ಲ ಶಬ್ದಗಳೂ ಅವಳ ಕಿವಿಗಳಿಗೆ ವರ್ಜ್ಯ"

"ಗಾಳೀ ಏನು ನಿನ್ನ ಮಾತಿನ ಅರ್ಥ ? ಏಷ್ಟಾಗಲಿ ಅವಳು ತರುಣಿ"

"ಚೇತನಾ, ನೀನು ವಯಸ್ಸಿನ ಲೆಕ್ಕಾಚಾರದಲ್ಲಿ ಹೇಳುತ್ತಿದ್ದೀಯ. ಈ ಮನೆಯ ಹೆಂಗಸರು ತರುಣಿಯರಾಗುವುದೇ ಇಲ್ಲ. ಬಾಲ್ಯಾವಸ್ಥೆಯ ಗೂಡಿನೊಳಗೆ ಮುದಿತನ ಅವಳನ್ನು ಸೇರಿಕೊಂಡು ಬಿಡುತ್ತೆ"

ಚೇತನಳ ಕಾಲು ಕಂಪಿಸಿದವು. ಸೋತ ಮನಸ್ಸಿನಿಂದ ಹೆದರುತ್ತಲೇ ಮುನ್ನಡೆದಳು.

ಗಾಳಿ ಹೇಳಿತು, "ಆಗೋ ಈ ಶತಮಾನದ ಎರಡನೆಯ ಮಗಳು"

"ಎಲ್ಲಿ ?"

"ಅಲ್ಲಿ, ರೈಲ್ವೆ ಹಳಿಯ ಬಳಿ ಕಲ್ಲಿದ್ದಲು ಆಯುತ್ತಿದ್ದಾಳೆ"

ವಯಸ್ಸು ಸುಮಾರು ಮೂವತ್ತಿರಬೇಕು. ಮೈ ಮುಚ್ಚಲು ಅಂಗವಸ್ತ್ರವೊಂದು ಹೊದ್ದು ಬಲಗೈಲಿ ಹಿಡಿಯಿಂದ ಕಲ್ಲಿದ್ದಲು ತೆಗೆದು ಬುಟ್ಟಿಯೊಳಗೆ ಹಾಕುತ್ತಿದ್ದಳು. ಹತ್ತಡಿ ದೂರದಲ್ಲಿ ಮಲಗಿದ್ದ ತನ್ನ ಮಗಳ ಕಡೆ ನೋಡಿದಳು. ಮಗಳ ಅಳು ಕೀರಲಾಗಿ ಇರಿಯುತ್ತಿತ್ತು. ಹೆಂಗಸು ಬುಟ್ಟಿಯನ್ನು ಬದಿಗಿಟ್ಟು ಮಗಳನ್ನು ಎದೆಗೊತ್ತಿಕೊಂಡಳು. ಮಗು ಮೊಲೆಯನ್ನು ಜಗ್ಗಿ ಜಗ್ಗಿ ಚೀಪಿತು. ಹಾಲು ಬರಲಿಲ್ಲ. ಮತ್ತೆ ಅಳುವಿಗೆ ಸುರು ಮಾಡಿತು.

ಚೇತನ ಅವಳ ಬಳಿ ಸಾರಿ ಕೂಗಿದಳು "ತಂಗೀ ! ಬಹುಶಃ ಹೆಂಗಸಿಗೆ ಕೇಳಲಿಲ್ಲ. ಮತ್ತೂ ಬಳಿ ಹೋಗಿ ಚೇತನ ಕರೆದಳು "ತಂಗೀ !"

ಉದಾಸೀನತೆಯಿಂದ ನೋಡಿದ ಆ ಹೆಂಗಸು ಕೂಗಿದ್ದು ತನಗಲ್ಲವೆನ್ನುವಂತೆ ಕಣ್ಣು ಹೊರಳಿಸಿದಳು.

ಚೇತನಳ ತುಟಿ ಕಂಪಿಸಿದವು. "ನನ್ನ ತಂಗೀ !"

ಹೆಂಗಸು ಅವಸರದ ನೋಟ ಬೀರಿ, ಉದಾಸೀನತೆಯಿಂದಲೇ ಕೇಳಿದಳು "ನೀನಾರು ?"

"ನಾನು ಚೇತನ"

ಹಾದು ಹೋಗುವವರು ಹೇಳಿದ್ದಕ್ಕೆ ಆಸಕ್ತಿಯೇ ಇಲ್ಲವೆಂಬಂತೆ ಹೆಂಗಸು, ಮತ್ತೆ ಅಳುತ್ತಿದ್ದ ಮಗಳ ಬಗ್ಗೆ ಯೋಚಿಸಿದಳು.

"ನಾನು ನಿನ್ನ ನಾಡಿಗೆ, ನಿನ್ನ ಊರಿಗೆ, ನಿನ್ನ ಮನೆಗೆ... ಬಂದಿದ್ದೇನೆ."

ಹೆಂಗಸು ನಾಡು, ಊರು, ಮನೆಯ ಮಾತುಗಳ ಗ್ರಹಿಸಲೇ ಇಲ್ಲ.

"ಈ ದಿನ ನಿನ್ನೊಂದಿಗೆ ಉಳಿಯುವೆ"

ಆ ರೀತಿ ಅಣಕವಾಡಬೇಡ ಎಂಬಂತೆ ಚೇತನಳ ಮುಖವನ್ನು ಮರಮರನೆ ನೋಡಿದಳು ಹೆಂಗಸು.

"ಪಾಪ ಮಗು ಅಳುತ್ತಿದೆ. ನೀನೇಕೆ ಮಗಳಿಗೆ ಮೊಲೆಯುಣಿಸಲಿಲ್ಲ ?

ಹೆಂಗಸು ಕೃಶವಾದ ತನ್ನ ಮೈ ನೋಡಿಕೊಂಡಳು, ಮಗಳ ಬಾಡಿದ ಮುಖ ನೋಡಿದಳು, ಪ್ರಶ್ನೆಯ ಮಹತ್ವವೇ ತಿಳಿಯಲಿಲ್ಲ ಅವಳಿಗೆ. ಹಾಲಿದ್ದರೆ ಮಗುವಿಗೆ ಮೊಲೆಯೂಡಿಸುತ್ತಿರಲಿಲ್ಲವೇ ಅವಳು ?

"ಇಲ್ಲಿಂದ ಎಷ್ಟು ದೂರ ನಿನ್ನ ಮನೆ ?"

"ಕೊಳಕು ಚರಂಡಿಯ ಆಚೆ ಬದಿ"

"ನಾ ನಿನ್ನೊಡನೆ ಬರುವೆ ?"

"ಆದರೆ ಮನೆಯನ್ನುವಂತದ್ದೇನೂ ಇಲ್ಲ. ಹುಲ್ಲಿನ ಜೋಪಡಿಯಷ್ಟೇ"

"ಅದೇನು ಗಣನೆಯ ವಿಶಯವೆ ?"

"ಹಾಸಿಗೆಯಿಲ್ಲ, ಜೋಡಿ ಗೋಣಿಚೀಲವುಂಟು"

"ನಿನ್ನ ಗಂಡ ?"

"ಜಾಯಿಲೆ ಅವನಿಗೆ"

"ಏನಾಗಿದ್ದ ಅವನು ?"

"ಕಾರ್ಖಾನೆಯಲ್ಲಿ ಕೂಲಿ ಮಾಡುತ್ತಿದ್ದ, ಕಳೆದ ವರ್ಷ ಅಲ್ಲಿನ ಖೋತಾದಿಂದಾಗಿ ಕೆಲಸದಿಂದ ತೆಗೆದು ಹಾಕಿದರು"

"ಆ ಮೇಲೆ ?"

"ಈಗ್ಗ ಒಂದು ವರ್ಷದಿಂದ ಖಾಯಿಲೆ ಅವನಿಗೆ"

"ನಿನಗಿದೊಂದೇ ಮಗುವೇ ?"

"ಮಗನೂ ಇದ್ದಾನೆ ಆದ್ರೆ..."

"ಎಲ್ಲಿದ್ದಾನೆ ?"

"ಒಂದು ದಿನ ಹಸಿವೆ ತಾಳಲಾರದೆ, ಸಾಹುಕಾರನೊಬ್ಬನ ಕಾರಿನಿಂದ ಸೇಬು ಕದ್ದ, ಪೊಲೀಸರು ಜೈಲಿಗೆ ಹಾಕಿದರು."

"ನಾ ನಿನ್ನೊಡನೆ ನಿನ್ನ ಮನೆಗೆ ಬರಲೆ ?"

"ಆದ್ರೆ ನೀ ಯಾರು ?"

"ನಾನು ಚೇತನ"

"ನಿನ್ನ ಹೆಸರೇ ಕೇಳಿಲ್ಲ ನಾನು"

"ಹಿಂದೊಮ್ಮೆ ಕೇಳಿರಬೇಕು ನೀನು, ಬಹುಶಃ ನೀನು ಕತೆಗಳ ಕೇಳುತ್ತಿದ್ದ ದಿನಗಳಲ್ಲಿ"

"ನನ್ನಮ್ಮನಿಗೆ ಬಹಳ ಕತೆ ಗೊತ್ತಿದ್ದವು. ನನ್ನಪ್ಪ ಸ್ವಂತ ಜಮೀನಿಲ್ಲದ ರೈತನಾಗಿದ್ದ. ಹಿರಿಯಕ್ಕನ ಮದುವೆಯ ಸಮಯದಲ್ಲಿ ಹಣ ಸಾಲ ತೆಗೆದುಕೊಂಡಿದ್ದೆವು. ತೀರಿಸ ಲಾಗಲಿಲ್ಲ. ಸಾಲ ಕೊಟ್ಟವ ನಮ್ಮ ದನಗಳ ಕೊಂಡು ಹೋದ, ನನ್ನಪ್ಪ ಕೆಲಸಕ್ಕೆಂದು ದೂರದೂರಿಗೆ ಹೋದ, ನನ್ನಮ್ಮನಿಗೆ ರಾತ್ರಿ ನಿದ್ದೆ ಬರುತ್ತಿರಲಿಲ್ಲ, ಆಗೆಲ್ಲಾ ದೆವ್ವ, ಭೂತಗಳ ಕತೆ ಹೇಳುತ್ತಿದ್ದಳು. ಆದರೆ ನಿನ್ಹೆಸರು ಕೇಳೇ ಇಲ್ಲ."

"ದೂರ ದೂರಿನಿಂದ ನಿನ್ನ ಅಪ್ಪ ಏನು ತಂದ ?"

"ಅಪ್ಪ ತುಂಬಾ ಚಿನ್ನ ತರುವನೆಂದು ಅಮ್ಮ ಹೇಳುತ್ತಿದ್ದಳು. ಆದರವ ಬರಲೇ ಇಲ್ಲ"

ಹೆಂಗಸು ತಡವರಿಸಿದಳು "ನಿನಗೇನಾಸಕ್ತಿ ನನ್ನ ಮನೆಗೆ ಬರುವುದಕ್ಕೆ" ಎಂದಳು.

"ನಾ...." ಚೇತನಗಳಿಗೆ ಇನ್ನೇನು ಹೇಳಲಾಗಲಿಲ್ಲ.

ಹೆಂಗಸು ಕಲ್ಲಿದ್ದಲು ತುಂಬಿದ ಬುಟ್ಟಿ ಹೊತ್ತು ನಿಂತಳು.

"ನಾ ನಿನಗೊಂದು ಉಡುಗೊರೆ ತಂದಿರುವೆ" ಎಂದು ಚೇತನ ಬಣ್ಣ, ಸುವಾಸನೆ ತುಂಬಿದ ಬುಟ್ಟಿಯನ್ನು ಕೊಡ ಹೋದಳು.

"ಬೇಡಪ್ಪ, ನೀನೇ ಇಟ್ಟುಕೊ" ಭಯಗೊಂಡವಳಂತೆ ಹೆಂಗಸು ಮುಖ ತಿರುಗಿಸಿದಳು.

"ನಾ ನಿನಗೆಂದೆ ತಂದೆ"

"ಬೇಡಕ್ಕ, ಪೊಲೀಸರು ಎಲ್ಲಿಂದಲೋ ಕದ್ದೆನೆಂದು ಹೇಳುತ್ತಾರೆ.

ಹೆಂಗಸು ಬೆನ್ನು ತಿರುಗಿಸಿ ಸರಸರನೆ ಮನೆಯ ಕಡೆ ಹೊರಟಳು. ಚೇತನ ಇನ್ನೂ ಹಿಂದೆ ಬರುತ್ತಿದ್ದುದನ್ನು ನೋಡಿ ಭಯದಿಂದ ನಿಂತಳು. "ಹಿಂತಿರುಗಿ ಹೋಗಿ ಬಿಡಕ್ಕ, ನನ್ಹಿಂದೆ ಬರಬೇಡ, ಪರಿಚಯವಿಲ್ಲದ ಜನರೆಂದರೆ ನನಗೆ ತುಂಬಾ ಭಯ. ಒಮ್ಮೆ ಪೇಟೆಯ ಯುವಕನೊಬ್ಬ ಬಂದ. ನಿನ್ನ ಗಂಡನಿಗೆ ಕೆಲಸ ಕೊಡಿಸುವೆ, ನಿನ್ನ ಮಗ ನನ್ನು ಜೈಲಿನಿಂದ ಬಿಡಿಸುವೆನೆಂದ. ನೆರೆಮನೆಯವರಿಂದ ಹಿಟ್ಟು ತಂದು ಅವನಿಗೆಂದು ರೊಟ್ಟಿ ಮಾಡಿಕೊಟ್ಟೆ. ಮಗ ನನ್ನು ನೋಡಲೆಂದು ಅವನ ಜೊತೆ ಹೋದೆ. ಹೋಗುವ ದಾರಿ...ದಾರಿಯಲ್ಲಿ, ಹೋಗುವ ದಾ...ರಿಯ...ಲಿ ಅವನು..."ಹೇಳುತ್ತಾ ಹೆಂಗಸಿನ ಅಂಗಾಂಗವೆಲ್ಲ ಕಂಪಿಸಿತು. ನಂತರ ಓಡಿ ಹೋದಳು.

ಚೇತನಳ ಕಣ್ಣೀರಧಾರೆ ಒರೆಸುತ್ತಾ ಗಾಳಿ ಹೇಳಿತು "ಈಗ ಮೂರನೆಯವಳ ನಿವಾಸಕ್ಕೆ ಒಯ್ಯುವೆ"

ವಿಶಾಲ ಬಂಗಲೆಯೊಂದರ ಮುಂದೆ ಹಾದು ಹೋಗು ವಾಗ ಗಾಳಿ, ಚೇತನಳ ಕಿವಿಯಲ್ಲಿ ಉಸುರಿತು

"ಇದೇ ಅವಳ ಮನೆ"

ಕಾವಲುಗಾರ ಗೇಟಿನ ಬಳಿ ಅವಳನ್ನು ನಿಲ್ಲಿಸಿದ. ಕೆಲಸ ದವಳ ಮೂಲಕ ಸಂದೇಶ ಕಳಿಸಿದ. ಚೇತನ ಬಹಳ ಹೊತ್ತು ಕಾದಳು. ಕೊನೆಗೂ ಅಪ್ಪಣೆ ದೊರೆಯಿತು. ಅವಳು ಒಂದು ಗಾಜಿನ ಬಾಗಿಲು ದಾಟಿ, ಇನ್ನೊಂದು ದಾಟಿ ; ರೇಷ್ಮೆ ಪರದೆಯ ಹಾದು, ಇನ್ನೊಂದು ಹಾದು ವಿಶೇಷವಾಗಿದ್ದ ಕೋಣೆ ತಲುಪಿದಳು. ರೂಮಿನ ಮೂಲೆಗೆ ಅಮೃತ ಶಿಲೆಯಿಂದ ಮಾಡಿದ ಹೆಂಗಸಿನ ಪ್ರತಿಮೆಯೊಂದು ನಿಂತಿತ್ತು. ಆದರ ಮೇಲೆ ನೀರ ಹನಿ ಗಳು ಚಿಮುಕುತ್ತಿದ್ದವು. ಅಲ್ಲಿಯೇ ಬಳಿಯ ಕುರ್ಚಿಯಲ್ಲಿ ಅದೇ ಅಮೃತಶಿಲೆಯ ಬಣ್ಣದ ಹೆಂಗಸು ಕುಳಿತಿದ್ದಳು. ರೇಶ್ಮೆಯ ದಾರಗಳು ಅವಳ ದೇಹವನ್ನು ಮುಚ್ಚುವ ಯತ್ನದಲ್ಲಿದ್ದವು. ನಿಲ್ಲಿಸಿದ್ದ ಹೆಂಗಸಿನ ಶಿಲ್ಪದಿಂದ ಸ್ವರ ಬರಲಿಲ್ಲ, ಕುಳಿತ ಶಿಲ್ಪ ಕೇಳಿತು "ಯಾರು ನೀನು ? ನಿನ್ನನ್ನು ಗುರುತಿಸಲಾಗಲಿಲ್ಲ"

ಚೇತನ ಸುತ್ತಲೂ ನೋಡಿದಳು. ಜೀವಂತವಾದ ದ್ದೇನೂ ಕಾಣಲಿಲ್ಲ. ಚೇತನ ನಿಂತ ಶಿಲ್ಪವನ್ನು ಮುಟ್ಟಿ ನೋಡಿದಳು. ಕಲ್ಲಿನಷ್ಟು ಗಟ್ಟಿಯಾಗಿತ್ತು. ಆಮೇಲೆ ಕುಳಿತ ಶಿಲ್ಪವನ್ನು ಮುಟ್ಟಿದಳು. ಮೆತ್ತನೆಯ ರಬ್ಬರ್‌ನಂತಿತ್ತು.

ಅಂತೂ ಹೂತ ಸ್ವರದಲ್ಲಿ ಹೇಳಿದಳು "ನಾನು ಚೇತನ"

ನನಗೆ ಸರಿಯಾಗಿ ಜ್ಞಾಪಕ ಬರುತ್ತಿಲ್ಲ. ಆದರೆ ನಾನೆಲ್ಲೋ ನಿನ್ನ ಹೆಸರು ಕೇಳಿದ್ದೇನೆ. ಸಣ್ಣ ವಯಸ್ಸಿನಲ್ಲಿ ಬಹುಶಃ ಯಾವುದೋ ಪುಸ್ತಕದಲ್ಲಿ ಓದಿರಬೇಕು.

"ಯಾವುದೋ ಪುಸ್ತಕದಲ್ಲಾ ?"

"ಈಗ ನೆನಪಿಸಿಕೊಳ್ಳಬಲ್ಲೆ. ನನ್ನ ಸಹಪಾಠಿಯೊಬ್ಬ ಕಾವ್ಯ ರಚಿಸುತ್ತಿದ್ದ. ಅವನು ಬರೆವ ಹಾಡುಗಳನ್ನೊಮ್ಮೆ ಉಡುಗೊರೆಯಾಗಿ ನೀಡಿದ್ದ, ಅಲ್ಲಿ ನಿನ್ನ ಹೆಸರಿತ್ತು"

"ಈಗೆಲ್ಲಿ ಅವನು ?"

"ಅವನೊಬ್ಬ ಬಡ ಹುಡುಗ. ಅವನು ಎಲ್ಲಿ ಏನಾಗಿ ದ್ದಾನೋ ಗೊತ್ತಿಲ್ಲ"

"ಫುತ್ತ್ರ ಅವನ ಹಾಡುಗಳು ?"

ಈ ಹೊಸ ಬಂಗಲೆಗೆ ಬರುವ ಮುನ್ನ ಹಳೆಯದನ್ನೆಲ್ಲ ಹಿಂದೆಯೇ ಬಿಟ್ಟು ಬಂದೆ. ಇವೆಲ್ಲವನ್ನು ಹೊಸದಾಗಿ ಕೊಂಡು ಕೊಂಡಿದ್ದೇವೆ."

"ಇವೆಲ್ಲಾ ಬಹಳ ದುಬಾರಿ ಇರಬೇಕು"

"ನನ್ನ ಗಂಡ ದೊಡ್ಡ ಶ್ರೀಮಂತ. ಮುಂಬರುವ ಚುನಾವಣೆಯಲ್ಲಿ 'ದೊಡ್ಡ ವ್ಯಕ್ತಿ'ಯಾಗಿ ಚುನಾಯಿಸಲ್ಪಡುವ ಭರವಸೆಯಿದೆ. ಯಾವ ಗಳಿಗೆಯಲ್ಲಿ ಏನಿಷ್ಟಪಟ್ಟರೂ ಕಷ್ಟವಿಲ್ಲದೆ ಕೊಳ್ಳಬಹುದು."

ರಬ್ಬರಿನಂತಾ ಹೆಂಗಸು ಮೇಜಿನ ಮೇಲಿದ್ದ ಹೂಗಳನ್ನು ಚೇತನಳಿಗೆ ನೀಡಲನುವಾದಳು.

ಚೇತನ ಅವನ್ನು ಮುಟ್ಟಿದಾಗ ಏನೋ ಕೆಟ್ಟ ವಾಸನೆ ಗ್ರಹಿಸಿದಳು.

ಈಗಷ್ಟೇ ಕೆಲಸದಾಳು ಕಿತ್ತು ತಂದ ಹೂಗಳು. ಕೆಲಸದಾಕೆ ಸರಿಯಾಗಿ ತೊಳೆಯಲಿಲ್ಲವೇನೋ, ಅದಕ್ಕೆ ಕೆಲಸದಾಳಿನ ಕೈಯು ಕೆಟ್ಟ ವಾಸನೆ ಮುತ್ತಿರಬೇಕು. ಈ ದಿನ ಶಕೆಯಲ್ಲವೆ ? ಮಾಮೂಲಿನಂತೆನಿಸುವುದಿಲ್ಲ ನನಗೆ"

"ನಿನಗಿಷ್ಟವಾದರೆ ಹೊರಗೆ ಕರೆದೊಯ್ಯುವೆ" ನಿಟ್ಟುಸಿರಿಟ್ಟು ಕರೆದಳು ಚೇತನ.

"ಇಲ್ಲ ಈ ರೀತಿ ಹೊರಗೆ ಹೋಗಲಾಗುವುದಿಲ್ಲ. ನಮಗೆ ಸಮಾನರಲ್ಲದ ಜನರೊಂದಿಗೆ ಬೆರೆಯುವುದು ನಮ್ಮ ಅಂತಸ್ತಿಗೆ ಕಡಿಮೆ. ನಿಜವೆಂದರೆ, ಯಾವುದೋ ತೊಂದರೆಗೆ ನನಗೆ ಆಪರೇಶನ್ ಆಗಿತ್ತು. ಆದರೂ ಬೇನೆ ಸ್ವಲ್ಪ ಹಾಗೆಯೇ ಉಳಿದಿದೆ. ಆ ಕಾರಣಕ್ಕೆ ಕೆಲವೊಮ್ಮೆ ನಾನೂ ವಿಪರೀತ ನೋವನುಭವಿಸುತ್ತೇನೆ."

ಚೇತನ ಎದ್ದು ನಿಂತಳು. ರಬ್ಬರಿನಂತಹ ಹೆಂಗಸಿನ ನಾಡಿ ನೋಡಿದಳು, ಅವಳ ಮೈಮುಟ್ಟಿ ಕೇಳಿದಳು

"ನಿನ್ನ ಹೃದಯವೇಕೆ ಬಡಿಯುವುದಿಲ್ಲ ? ಅದು ಸ್ತಬ್ಧವಾಗಿದೆ, ಕಲ್ಲಿನಂತೆ ತಣ್ಣಗಿದೆ"

"ತೊಂದರೆ ಇರುವುದು ಅಲ್ಲೇ. ನನ್ನ ಗಂಡ ವಿದೇಶಕ್ಕೆ ಹೋಗಬೇಕಾಗಬಹುದೆಂದು ಹೇಳಿದ್ದಾನೆ. ಪ್ರಾಯಶಃ U.S.A.ಗೆ. ಅಲ್ಲಿ ನುರಿತ ವೈದ್ಯರಿರುತ್ತಾರೆ ಅದಕ್ಕೆ. ಅಲ್ಲಿ ಮತ್ತೊಮ್ಮೆ ನಾನು ಆಪರೇಶನ್ ಮಾಡಿಸಿಕೊಳ್ಳಬೇಕು."

"ಯಾತಕ್ಕೆ"

"ಯಾವಾಗ ಹೊಸದಾಗಿ ಮದುವೆಯಾದ ಹುಡುಗಿ ಉಚ್ಛಮನೆತನಕ್ಕೆ ಸೇರುತ್ತಾಳೋ ಆಗ ಅವಳಿಗೆ ಈ ನಾಡಿನ ನುರಿತ ಡಾಕ್ಟರ್‌ಗಳು ಮೊದಲ ರಾತ್ರಿಯೇ ಆಪರೇಶನ್ ಮಾಡುತ್ತಾರೆ. ಪ್ರತ್ಯೇಕವಾಗಿ ಮೇಲ್ವರ್ಗಗಳಲ್ಲಿ ಈ ಸಂಪ್ರದಾಯ ಜಾರಿಯಲ್ಲಿದೆ."

"ಮೊದಲ ರಾತ್ರಿ ಆಪರೇಶನ್ನೇ ?"

"ಹೌದು. ಅವಳ ದೇಹವನ್ನೆಲ್ಲ ಕತ್ತರಿಸಿ ನೋಡಿದ ಮೇಲೆ, ಅವಳ ಹೃದಯವನ್ನು ತೆಗೆಯಲಾಗುತ್ತದೆ. ಅದರ ಜಾಗದಲ್ಲಿ ಬಂಗಾರದ ತುಂಡನ್ನಿರಿಸುತ್ತಾರೆ. ನನ್ನ ಆಪರೇಶನ್ನಲ್ಲಿ ಸ್ವಲ್ಪ ತಪ್ಪಾಯಿತು. ಅದಕ್ಕೆ ಆಗಾಗ್ಗೆ ವಿಪರೀತ ನೋವನ್ನನುಭವಿಸುತ್ತೇನೆ. ಮುಂಬರುವ ಚುನಾವಣೆಯಲ್ಲಿ ನನ್ನ ಗಂಡ ವಿಜಯಿಯಾದರೆ, ಮುಂದಿನ ತಿಂಗಳು ಹೊರದೇಶಕ್ಕೆ ಹೋಗುತ್ತೇವೆ. ಮತ್ತೊಮ್ಮೆ ಆಪರೇಶನ್ ಮಾಡಿಸಿಕೊಳ್ಳುವೆ. ನಂತರ ಸಂಪೂರ್ಣ ಗುಣಮುಖಳಾಗುವೆ"

"ನಾ ನಿನಗೆ ಉಡುಗೊರೆ ತಂದಿರುವೆ"

"ಬೇಡ. ಚುನಾವಣೆಯ ದಿನಗಳು ಹತ್ತಿರವಾಗುತ್ತಿರುವುದರಿಂದ ನನ್ನ ಗಂಡ ಯಾರಿಂದ ಏನನ್ನೂ ತೆಗೆದುಕೊಳ್ಳಬೇಡವೆಂದು ಹೇಳಿದ್ದಾರೆ. ಅಲ್ಲದೆ ದೇಶದ ದೊಡ್ಡ ದೊಡ್ಡ ಮಿಲ್‌ಗಳಲ್ಲಿ ಷೇರುಗಳಿವೆ ನಮಗೆ. ಆದ್ದರಿಂದ ಈ ಸಣ್ಣ ಪುಟ್ಟ ಉಡುಗೊರೆ ಸ್ವೀಕರಿಸುವುದು ಯೋಗ್ಯವಲ್ಲ. ಫೋನು ರಿಂಗಣಿಸಿತು. ಫೋನಿನಲ್ಲಿ ಮಾತಾಡಿದ ನಂತರ ಅವಳು ಹೇಳಿದಳು "ಅಕ್ಕಾ, ಏನಾದರೂ ಹೇಳುವುದಿದ್ದರೆ ಮತ್ತೊಮ್ಮೆ ಫೋನು ಮಾಡಿ ಹೇಳುವುದೊಳ್ಳೆಯದು. ಈಗ ನನ್ನ ಗಂಡ ಅವರ ಅಸೋಸಿಯೇಶನ್ ಮೆಂಬರುಗಳೊಂದಿಗೆ ಮನೆಗೆ ಬರುತ್ತಿದ್ದಾರೆ."

ಗಾಳಿ, ಚೇತನಳಿಗೆ ಆಸರೆಯಾಗುವಂತೆ ಕೈ ಹಿಡಿದು ನಾಲ್ಕನೆ ಸಹೋದರಿಯಿದ್ದ ಮುಂದಿನ ಮನೆಗೆ ಕರೆದು ಕೊಂಡು ಹೋಯಿತು.

ತುಂಬ ಸರಳವಾದ ಮನೆ ಅದು. ಮನೆಯ ಮುಂದೆ ನಿಂತಿದ್ದ ಹೊಳೆಯುವ ಕಾರು ಕಣ್ಣು ಕುಕ್ಕಿತು. ಹೊಸಿಲ ಬಳಿ ನಿಂತ ಚೇತನ ಒಳಗಿಣುಕಿದಳು. 22-23ರ ತರುಣಿಯೊಬ್ಬಳು ಮಗುವನ್ನು ಸಂತೈಸುತ್ತ ಮಲಗಿಸುತ್ತಿದ್ದಳು. ಕೇವಲ ಅಗತ್ಯವಾದ ವಸ್ತುಗಳು ಆ ಕೋಣೆಯಲ್ಲಿದ್ದವು. ವಿಚಿತ್ರವೆಂದರೆ ಆ ಹೆಂಗಸು ಧರಿಸಿದ್ದ ಬಟ್ಟೆ ಬಹು ಆಡಂಬರವಾಗಿದ್ದವು.

ಚೇತನ ಮೆಲ್ಲನೆ ಬಾಗಿಲು ಬಡಿದಳು.

"ಯಾರಲ್ಲಿ ? ಮೆಲ್ಲಗೆ ಬಡಿಯಿರಿ", ತರುಣಿ ಬಾಗಿಲ

ವರೆಗೂ ಬಂದು ಹೇಳಿದಳು. ಜೊತೆಯಲ್ಲಿ ಮಗುವಿನ ನಿದ್ದೆ ಹಾಳಾಗುವುದೆಂದು ಸೇರಿಸಿದಳು. ನಂತರ ಚಕಿತಳಾಗಿ ನುಡಿದಳು;

"ನೀನು... ನೀನು" ತೊದಲಿದಳು.

"ನಾನು ಚೇತನ"

"ಗೊತ್ತು ನನಗೆ"

"ಗೊತ್ತಾ ?"

ಜೀವಮಾನವೆಲ್ಲಾ ನಿನ್ನ ನೆರಳಿನ ಹಿಂದೆ ಅಲೆದಾಡಿದ್ದೇನೆ ಈಗ ಪೂರ್ತಿ ಬಳಲಿದ್ದೇನೆ. ಅಲೆದಾಡುವುದು ಕೈ ಬಿಟ್ಟೆ. ನೀ ಹೋದರೆ ಒಳ್ಳೆಯದು. ಎಲ್ಲಿಂದ ಬಂದೆಯೊ ಅಲ್ಲಿಗೆ ಹಿಂತಿರುಗಿ ಹೋಗು. ಬಾಗಿಲ ಮುಂದಿನ ಕೊಳಕಿನ ಎಳೆ ನಿನಗೆ ಕಾಣಿಸದೆ ? ನೀನದನ್ನು ದಾಟುವಂತಿಲ್ಲ. ಹೋಗು ಇಲ್ಲಿಂದ ... ಹೋಗು ನೀನು" ತರುಣಿ ಏದುಸಿರು ಬಿಡುತ್ತಿದ್ದಳು.

"ನನ್ನ ಒಳ್ಳೆಯ ತಂಗಿ..."

"ತಂಗೀ ? ನಾ ಯಾರಿಗೂ ತಂಗಿಯಲ್ಲ, ಯಾರ ಮಗಳೂ ಅಲ್ಲ, ಯಾರಿಗೆ ಏನೂ ಅಲ್ಲ"

"ನಿನ್ನ ಮಗು..." ಮಲಗಿದ್ದ ಮಗುವನ್ನು ನೋಡುತ್ತಾ ಚೇತನ ಕೇಳಿದಳು.

"ನನ್ನ ಮಗು... ನನ್ನ ಮಗು... ಆದರೆ ಯಾರೂ ಅದರ ಅಪ್ಪನೆಂದು ಹೇಳುವುದಿಲ್ಲ"

"ನನಗರ್ಥವಾಗಲಿಲ್ಲ"

ನಮ್ಮ ದೇಶದ ಸ್ವಾತಂತ್ರ್ಯದ ಬುನಾದಿಗೆ ನನ್ನ ಮೂಳೆಗಳು ದುಡಿದವು. ಸ್ವಾತಂತ್ರ್ಯದ ಸಸಿ ನೆಟ್ಟಾಗ ರಕ್ತ ಬಸಿದಿದ್ದೆ. ಆ ರಾತ್ರಿ ಸಂತೋಷದ ಹಣತೆಗಳು ಎಲ್ಲೆಡೆ ಉರಿಯುವಾಗ ನನ್ನ ಮರ್ಯಾದೆ ಗೌರವಗಳೆಲ್ಲ ಉರಿದು ಹೋದವು. ಈ ಮಗು ಆ ರಾತ್ರಿಯ ಫಲ, ಆ ಜ್ವಾಲೆಯ ಬೂದಿ, ಆ ಗಾಯದ ಕಲೆ...."

"ನನ್ನ ನೊಂದ ತಂಗಿಯೇ..."

"ಅಂದಿನಿಂದ, ಪ್ರತಿ ರಾತ್ರಿ ಅದೇ ಕಥೆ ಮುಂದುವರೆದಿದೆ. ಅನೇಕ ಸಲ ನಿನ್ನ ಬಗ್ಗೆ ಕನವರಿಸುತ್ತಿದ್ದೆ. ನೀನು ನನ್ನ ಶುದ್ಧ ಕೈಗಳಿಗೆ ಹಚ್ಚ ಹಸಿರು ರಂಗು ಬಳಿಯುವೆ, ನನ್ನ ಅಮ್ಮನ ಮನೆಯ ಅಂಗಳವ ಹಾಡಿನಿಂದ ತುಂಬುವೆ, ಕಿವಿಯೊಳಗೆ ಶಹನಾಯಿಯ ವಿವಾಹ ಸಂದೇಶ ತುಂಬುವೆ ಎಂದು ತಿಳಿದಿದ್ದೆ ! ನನ್ನ ಹಳ್ಳಿಯ ಸದೃಢ ಯುವಕ ನನ್ನ ಕನಸಿನ ದೊರೆಯಾಗಿದ್ದ. ನನ್ನ ಹಳ್ಳಿ ಕೊಳ್ಳೆಯಾದಾಗಲೂ, ನನ್ನ ಅಪ್ಪನನ್ನು ಕೊಚ್ಚಿ ಹಾಕಿದಾಗಲೂ, ನನ್ನಣ್ಣಂದಿರ ಕೊಲೆಯಾದಾಗಲೂ ನಿನ್ನ ನೆರಳಿನೊಡನೆ ಕಣ್ಣಾಮುಚ್ಚಾಲೆಯಾಡಿದ್ದೆ. ಒಂದು ಸರ್ಪ ಕುಟುಕಿತು. ಇನ್ನೊಂದು ಸರ್ಪ... ಮತ್ತೊಂದು ಸರ್ಪ.... ಮನುಷ್ಯ ತಲೆಯ ಈ ಸರ್ಪಗಳು ಕುಟುಕಿದರೆ ಹೆಂಗಸು ಎಂದಿಗೂ ಚೇತರಿಸಿಕೊಳ್ಳಲಾರಳು. ದಿನವೂ ವಿಷದ ನವೆಯಿಂದ ಸುಮ್ಮನೆ ಜೀವ ಸವೆಸುತ್ತಾಳೆ.

ನಿನ್ನ ನೆರಳ ಸಣ್ಣ ಎಳೆಯನ್ನು ಕಂಡೆ. ನನ್ನ ನಾಡಿನ ಜನ, ಈ ಸರ್ಪಗಳ ಹಿಡಿತದಿಂದ ನಾನು ಪಾರಾಗುವೆನೆಂದರು. ರಕ್ತದೊಳಗಿನ ವಿಶವನ್ನೆಲ್ಲಾ ತೆಗೆದು, ನನ್ನ ಶುದ್ಧ ಮುಗ್ಧತೆ ಹಿಂದಕ್ಕೆ ಪಡೆಯುವೆನೆಂದರು. ನಾನು ನಿನ್ನ ನೆರಳಿನ ಹಿಂದೆ ಓಡಿದೆ. ಅದೊಂದು ಮರೀಚಿಕೆ, ಬರೀ ಮರೀಚಿಕೆ.

ನನ್ನ ಕನಸಿನ ದೊರೆ ನನ್ನೊಪ್ಪಲಿಲ್ಲ. ಸುಮ್ಮನೆ ಬಾಗಿಲಿಂದ ಹೊರದೂಡಿದ. ನಾನು ಮತ್ತೊಮ್ಮೆ ಅದೇ ವಿಷವನ್ನು ಕುಡಿದೆ. ಅನೇಕ ವಿಧ ವಿಧ ಸರ್ಪಗಳು ಸುತ್ತಿಕೊಂಡವು. ನನ್ನ ಮನೆಯ ಮುಂದಿನ ಕಾರನ್ನು ನೀನು ನೋಡಲಿಲ್ಲವೆ ? ಹೇಗೆ ಹೊಳೆಯುತ್ತದೆ ! ಬಹಳ ದೊಡ್ಡ ಸರ್ಪ ಅದರ ಮಾಲೀಕ ! ಈ ರಾತ್ರಿ ಕುಟುಕಲು ಬರುತ್ತಿದ್ದಾನೆ."

ನಾಲಿಗೆ ಕಟ್ಟಿತು ಚೇತನಳಿಗೆ. ತಂದ ಉಡುಗೊರೆ ಕಣ್ಣೀರಲ್ಲಿ ನೆನೆಯಿತು.

"ಏನು ತಂದಿರುವೆ ಉಡುಗೊರೆಯ ? ನನ್ನ ವಿಷಪೂರಿತ ಮೈ ಕಾಣುವುದಿಲ್ಲವೆ ? ಮುಟ್ಟಿದರೆ ನಿನ್ನ ಬಣ್ಣಗಳು, ವಾಸನೆಗಳು ವಿಷವಾಗಿ ಬಿಡುತ್ತವೆ. ಪ್ರತಿಯೊಂದು ಅಂಗಾಂಗವು ವಿಷಮಯ. ಬೇರೇನೂ ಇಲ್ಲ ಬರಿ ವಿಷ... ವಿಷ..."

ಗಾಳಿ, ಮೂರ್ಛೆ ಹೋದ ಚೇತನಳಿಗೆ ಗಾಳಿ ಹಾಕಿತು. ಚೇತನ ಬಂದ ಮೇಲೆ ಗಾಳಿ ಐದನೆ ಸಹೋದರಿಯ ಮನೆಗೆ ಕೊಂಡೊಯ್ಯಿತು.

20ರ ಸುಂದರ ಹುಡುಗಿಯ ಸುತ್ತಲು ಪುಸ್ತಕ, ಬಣ್ಣ ಸಂಗೀತವಾದ್ಯಗಳು ಹರಡಿಕೊಂಡಿದ್ದವು. ಸ್ವಲ್ಪ ಸಮಾಧಾನವಾಯಿತು ಚೇತನಳಿಗೆ. ಚೆಂದದ ಹುಡುಗಿ ವಾದ್ಯದ ಮೇಲೆ ಬೆರಳಾಡಿಸಿದಳು. ಮಧುರಗಾನ ಗಾಳಿಯೊಳಗೆ ಹರಡಿತು. ಅವಳು ಹಾಡುತ್ತಲೇ ಇದ್ದಳು. ಕಂಬನಿ ತಾರೆಯಂತೆ ಪಳಗುಟ್ಟಿತು. ನಂತರ ಹಾಳೆಯ

ಮೇಲೆ ಬಣ್ಣದ ಎಳೆಗಳಲಿ ಸೊಗಸಿನ ಚಿತ್ರ ಬಿಡಿಸಿದಳು. ಆ ಕಲಾಪೂರ್ಣ ಹಸ್ತಗಳನ್ನೂ ಚುಂಬಿಸ ಬೇಕೆನಿಸಿತು ಚೇತನಳಿಗೆ. ಮರಳುಗೊಳಿಸುವ ಇಂಪಾದ ದನಿ, ಬೆರಗನಿ ಪದಗಳು, ಸೊಗಸಾದ ಚರ್ಯೆಗಳು ಸಂಪೂರ್ಣವಾಗಿ ವಾತಾವರಣವನ್ನಾವರಿಸಿಕೊಂಡಿತು. . ಚೇತನ ದೀರ್ಘ ಉಸಿರೆಳೆದು ಮುಂದೆ ಬಂದಳು. ಅವಳ ಕೈ ಹಿಡಿದು ಬಣ್ಣ, ಸುಗಂಧ ತುಂಬಿದ ಬುಟ್ಟಿಯನ್ನಿತ್ತಳು.

ಹುಡುಗಿಗೆ ಆಶ್ಚರ್ಯವಾಯಿತು.

"ನಾನು ಚೇತನ"

"ಗೊತ್ತು..." ಉಚ್ಚರಿಸಿದಳು ಹುಡುಗಿ. ಮತ್ತೇನು ಹೇಳಲಿಲ್ಲ.

ತಕ್ಷಣ ಚೇತನ ಮುಗ್ಗರಿಸಿ ನಿಂತಳು. ಮನೆಯ ಮುಂದಿನ ಕಬ್ಬಿಣದ ತಂತಿಗಳು ತಡೆದವು.

"ಈ ಕ್ಷಣ ನಿನ್ನ ಸ್ವಾಗತಿಸಲಾರೆ" ತಲೆ ಬಗ್ಗಿಸಿ ಹೇಳಿದಳು ಹುಡುಗಿ.

"ಯಾಕೆ ?" ಚಕಿತಳಾಗಿ ಕೇಳಿದಳು ಚೇತನ.

"ನಿದ್ರಿಸುವಾಗ ಕನಸಿನಲ್ಲಿ ಬಂದರೆ, ಎಚ್ಚರವಿದ್ದಾಗ ಕಲ್ಪನೆಯಲಿ ಬಂದರೆ ಕೊನೆಯಿಲ್ಲದೆ ನಿನ್ನೊಂದಿಗೆ ಮಾತನಾಡುವೆ, ಕಥೆಗಳ ಹೇಳುವೆ, ನೀ ಕೇಳಬೇಕೆನಿಸಿದ್ದ ನ್ನೆಲ್ಲ ಹೇಳುವೆ, ಇಲ್ಲವಾದರೆ ನಿನ್ನ ನೆರಳು ಹಿಡಿಯಲು ಯತ್ನಿಸುವೆ. ನೋಡು ಬಣ್ಣಗಳೊಂದಿಗೆ ನಿನ್ನನ್ನು ಹೇಗೆ ಚಿತ್ರಿಸಿರುವೆ, ಈ ತಂತಿಗಳ ಮಿಟಿ ನಿನ್ನ ಹಾಡ ಹಾಡುವೆ, ನಿನ್ನ ಒಲುಮೆಯ ಕಥೆಗಳ ಈ ಲೇಖನಿಯಲಿ ಹರಿಸುವೆ"

"ಆದರೆ, ಈ ದಿನ ನಾನೇ ನಿನ್ನ ಬಳಿ ಬಂದಿರುವಾಗ... ನೀನು..."

"ಮೆಲ್ಲಗೆ ಮಾತನಾಡು... ಮೆಲ್ಲಗೆ... ಮನೆಯ ಎಲ್ಲ ಗೋಡೆಗಳಿಗೆ ರಂಧ್ರಗಳುಂಟು. ಸಾವಿರ ಕಣ್ಣುಗಳು ನಾ ಮಾಡುವುದನ್ನೆಲ್ಲ ಕಾಯುತ್ತವೆ. ಈ ರಂಧ್ರಗಳಲ್ಲಿ ನೋಡು. ಪ್ರತಿ ರಂಧ್ರಗಳ ಹಿಂದೆ ಭೀಕರ ಜೋಡಿ ಕಣ್ಣು ಗಳಿವೆ. ಆ ಕಣ್ಣುಗಳ ತುಂಬ ಲಾವಾರಸವುಂಟು. ಒಂದೊಂದು ನಾಲಿಗೆಗಳಿಂದ ಸಾವಿರ ಬಾಣಗಳು ಹಾರು ತ್ತವೆ. ಕ್ಷಣ ನಿನ್ನ ಬಳಿ ಕುಳಿತುಕೊಂಡರೆ, ಬಾಣಗಳು ಕಣ್ಣು ಮಿಟುಕಿಸುವುದರೊಳಗೆ ನನ್ನ ಬಣ್ಣದ ಬಟ್ಟಲುಗಳು ಕೆಡವಿ ಬಿಡುತ್ತವೆ. ನನ್ನ ಸಂಗೀತ ವಾದ್ಯಗಳ ತಂತಿ ಹರಿಯುತ್ತವೆ, ನನ್ನ ಹಾಡಿನ ಒಂದೊಂದು ಪದಗಳ ಚುಚ್ಚುತ್ತವೆ. ಮತ್ತೆ ಲಾವಾರಸ ತುಂಬಿದ ಆ ಕಣ್ಣುಗಳು..."

"ಆದರೆ, ಇದೇ ಜನ ನಿನ್ನ ಹಾಡು ಕೇಳುತ್ತಾರೆ, ಕಥೆ ಓದುತ್ತಾರೆ, ಚಿತ್ರ ನೋಡುತ್ತಾರೆ..."

"ಈ ನಾಡಿನ ಕಲಾವಿದರು ನಿನ್ನ ಬಗ್ಗೆ ಮಾತನಾಡು ತ್ತಾರೆ, ನಿನ್ನ ಮುಖ ನೋಡಲಾಗದು ಅವರಿಗೆ. ನಿನ್ನ ಮುಖ ನೋಡಲು ಪ್ರಯತ್ನಿಸಿದವರಿಗೆ ಸಾವಿನ ಶಿಕ್ಷೆ... ಚೇತನ ನೀನೀಗ ಹೊರಟು ಹೋಗುವುದೊಳ್ಳೆಯದು. ಯಾರಾದರೂ ನೋಡಬಹುದು. ನನ್ನ ಕನಸಿನಲ್ಲಲ್ಲದೆ ಬೇರೆಲ್ಲಿ ನಿನ್ನನ್ನು ರಂಜಿಸಲಿ..."

"ನಿನಗೆಂದು ಉಡುಗೊರೆ ತಂದಿರುವೆ"

"ಆವಾಗ ಮಾತ್ರ ತೆಗೆದುಕೊಳ್ಳುವೆ. ಮತ್ತೆ ಬಾ. ನಿನ ಗೆಂದು ಸ್ವರ್ಗಲೋಕ ರಚಿಸುವೆ. ಚೇತನ, ಖಂಡಿತ ಮತ್ತೊಮ್ಮೆ ಬಾ, ನನ್ನ ಸ್ವರ್ಗವ ನಿನ್ನ ಉಡುಗೊರೆಯಲಿ ಅಲಂಕರಿಸುವೆ, ಬೆಳಗಿನ ಜಾವ ಬಾ, ನಿನ್ನ ಪ್ರೀತಿಯಲಿ ಕಾವ್ಯ ಬರೆಯುವೆ, ನಿನ್ನ ಸೊಬಗಿನ ಚಿತ್ರ ಬರೆಯುವೆ, ನಿನ್ನ ಲಾವಣ್ಯದ ಹಾಡು ಹಾಡುವೆ. ಆದರೆ ನೀನೀಗ ಹೊರಡು, ಇಲ್ಲ ನಿನ್ನ ಇರುವು ಅವರಿಗೆ ತಿಳಿದು ಬಿಡುತ್ತದೆ..."

ಹುಡುಗಿ ಚೇತನಳಿಗೆ ಬೆನ್ನು ತಿರುಗಿಸಿದಳು.

(ಅನುವಾದಿತ)

---

ಭಾರತೀಯ ಜ್ಞಾನಪೀಠವು 1991ರ ಸಾಲಿನ ಮೂರ್ತಿದೇವಿ ಪ್ರಶಸ್ತಿಯನ್ನು ಒರಿಯಾ ಲೇಖಕಿ ಡಾ॥ ಪ್ರತಿಭಾ ರಾಯ್ ಅವರಿಗೆ ನೀಡಿದೆ. ದ್ರೌಪದಿಯ ಪಾತ್ರವನ್ನು ಕುರಿತ 'ಯಜ್ಞಸೇನಿ' ಕಾದಂಬರಿಗಾಗಿ ಅವರಿಗೆ ಈ ಪ್ರಶಸ್ತಿ ಲಭಿಸಿದೆ.

---

# ಹೇಳು ಜಾನಕಿ

ಹೇಳು ಜಾನಕಿ-ನೀ
ಬಯಸಿದ್ದೆಯಾ ?
–ಅನಾಥ ಮಗುವಾಗಿ 'ಸೀತೆ'ಯು
ಮೊನೆಗೆ ಸಿಗುವುದ—ಮಿಥಿಲೆಯ
ರಾಜಪುತ್ರಿಯಾಗಿ ಮೆರೆವುದ

–ರಾಘವನೇ ಪತಿಯಾಗಿ
ದೊರೆವುದ—ನಾರುಡುಗೆಯುಟ್ಟು
ವಿಪಿನದಲ್ಲಲೆವುದ.
–ಪೌಲಾಸ್ತ್ಯನ ಪುಷ್ಪಕ ವಿಮಾನದಿ
ಪಯಣವ—ಧರ್ಮಾ ಧರ್ಮಗಳ
ನಡುವಿನ ಕದನವ

–ಪಾತಿವ್ರತ್ಯದ 'ಅಗ್ನಿ'
ಪರೀಕ್ಷೆಯ-ಅಯೋಧ್ಯಾ ಸಿಂಹಾಸನದ
ಮಹಾರಾಣಿ ಪಟ್ಟವ
–ನವಮಾಸ ತುಂಬುತಿರುವಾಗ
ಪತಿಯಿಂದ ವಿಯೋಗವ—ಶೋಷಿತ
ಸ್ತ್ರೀಯರ ಸಾಲಿನಲ್ಲಿ ಸ್ಥಾನವ
–ಅನಾಥಳ ತೆರದಿ ಕಾನನದಿ ಪುತ್ರ
–ರಿಗೆ ಜನ್ಮವ ನೀವುದ—ಧರಣಿಯೊಡೆಯನ
ವರಿಸಿಯೂ ಕಣ್ಣೀರಲ್ಲಿ ಕೈ ತೊಳೆವುದ
–ಅವನಿಯೊಡಲಲ್ಲೇ ಐಕ್ಯ
ವಾಗುವುದ—ನೀ ಬಯಸಿದ್ದೆಯಾ ?

ಹೇಳು ಜಾನಕಿ—ನೀ
ಬಯಸಿದ್ದೆಯಾ ?-ಶೋಷಣೆಗಾರ
ಪುರುಷ ಸಮಾಜವನ್ನೇ ಧಿಕ್ಕರಿಸಿ
ಮಹಾರಾಣಿ 'ಪದ'ವನ್ನು ತ್ಯಜಿಸಿ
ಆತ್ಮಾರ್ಪಣೆಗೈದು—ಕ್ರಾಂತಿಯ
ಕಿ (ಕು)ಡಿಯಾಗಿ ಇತಿಹಾಸದಿ
ಹೊಸ ಅಧ್ಯಾಯ ಆರಂಭಿಸುವುದ
ನೀ ಬಯಸಿದ್ದೆಯಾ ?

—ಜಿ. ಮುದ್ದುವೀರ ಸ್ವಾಮಿ

**ಸ್ತ್ರೀವಾದಿ ಲೇಖಕಿ ಛಾಯಾ ದಾತಾರ್ ರಚಿಸಿದ ಸ್ತ್ರೀ-ಪುರುಷ್**

'**ಶಾಶ್ವತಿ**' ಪ್ರಶಸ್ತಿ ವಿಜೇತ ಕೃತಿ.

'ಯುಗಾಂತ' ಕೃತಿಯ ಅನುವಾದಕಿ

**ಸರಸ್ವತಿ ರಿಸಬೂಡ** ಅವರು ಕನ್ನಡೀಕರಿಸಿರುವ

ಸ್ತ್ರೀ-ಪುರುಷ

ಬಿಡುಗಡೆ ಆಗಿದೆ.

ಪ್ರತಿಗಳಿಗೆ ಸಂಪರ್ಕಿಸಿ :

**ಇಳಾ ಪ್ರಕಾಶನ**

153, 4ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ

ಚಾಮರಾಜಪೇಟೆ, ಬೆಂಗಳೂರು-560 018

ಬೆಲೆ : ಉತ್ತಮ ಪ್ರತಿ **ರೂ. 36-00**

ಸಾದಾ ಪ್ರತಿ **ರೂ. 24-00**

REGD. NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ :
"ಮಾನಸ"
ಪಂಚಾಯಿತಿ ರಸ್ತೆ,
ಕಾಡುಗೋಡಿ
ಬೆಂಗಳೂರು - 560 067